ಉಪನ್ಯಾಸ ಗ್ರಂಥಮಾಲೆ

೮೬

# ಕೆಳದಿ ನಾಯಕರು

ಡಾ॥ ಜಿ. ಎಸ್. ದೀಕ್ಷಿತ




ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಮೇ ೧೯೬೯

ಉಪನ್ಯಾಸ ಗ್ರಂಥಮಾಲೆ

೮೭

# ಕೆಳದಿ ನಾಯಕರು

ಡಾ॥ ಜಿ. ಎಸ್. ದೀಕ್ಷಿತ



ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಮೇ ೧೯೭೯

ಪ್ರಕಾಶಕರು :

**ಎಸ್. ಎಸ್. ಒಡೆಯರ,**

ಎಂ. ಎ., ಎಲ್ ಎಲ್. ಬಿ.

ರಜಿಸ್ಟ್ರಾರ್,

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಮೊದಲನೆಯ ಮುದ್ರಣ : ಮೇ ೧೯೬೯ - ೩೦೦೦ ಪ್ರತಿಗಳು



ಬೆಲೆ : ೨೫ ಪೈಸೆ

ಮುದ್ರಕರು :

**ಚ. ತಿ. ತಡಕೋಡ**

ಶ್ರೀ ಶಾರದಾ ಪ್ರಿಂಟಿಂಗ ಪ್ರೆಸ್,

ಧಾರವಾಡ-೧

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವುದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವ ವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರೆವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯಂ.

ಈ ಮಾಲೆಯಲ್ಲಿ ಈಗಾಗಲೆ ಎಂಬತ್ತೈದು ಗ್ರಂಥಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿ-ರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಮೂರು-ನಾಲ್ಕು ಮುದ್ರಣಗಳನ್ನೂ ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯು ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

**ಎ. ಎಸ್. ಅಡಕೆ**
ಕುಲಪತಿ
ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ
೧-೫-೧೯೬೯

# ಕೃತಜ್ಞತೆ

ಬೆಲ್ಲದ–ಬಾಗೇವಾಡಿಯಲ್ಲಿ ೨೮–೪–೧೯೭೬ರಂದು ಏರ್ಪಡಿಸಿದ್ದ ಕರ್ನಾಟಕ ವಿಶ್ವವಿದ್ಯಾಲಯದ ೧೨೬ನೆಯ ಉಪನ್ಯಾಸ ಶಿಬಿರದಲ್ಲಿ 'ಕೆಳದಿಯ ನಾಯಕರು' ಎಂಬ ವಿಷಯದ ಮೇಲೆ ಮಾತನಾಡಲು ಅವಕಾಶ ಕೊಟ್ಟು, ಮತ್ತು ಅದೇ ವಿಷಯವನ್ನು ಕುರಿತು ಪುಸ್ತಕವನ್ನು ಬರೆಯಲು ಆಗ್ರಹ ಪಡಿಸಿದ ಶ್ರೀ. ಚನ್ನವೀರ ಕಣವಿಯವರಿಗೆ ತುಂಬಾ ಋಣಿಯಾಗಿದ್ದೇನೆ. ಈ ಪುಸ್ತಕವನ್ನು ಪ್ರಕಟಿಸುತ್ತಿರುವ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ನಾನು ಕೃತಜ್ಞನಾಗಿದ್ದೇನೆ. ಇದನ್ನು ಬರೆಯುವಾಗ ತಮ್ಮ ಅಮೂಲ್ಯವಾದ ಸಹಾಯವನ್ನು ನೀಡಿದ ಶ್ರೀ. ಡಿ. ಟಿ. ಜೋಶಿಯವರನ್ನೂ ಮತ್ತು ಶ್ರೀ. ಸದ್ಯೋಜಾತ ಶಿವಾಚಾರ್ಯ ಮಹಾಸ್ವಾಮಿಗಳನ್ನೂ ನಾನು ಇಲ್ಲಿ ಹೃತ್ಪೂರ್ವಕವಾಗಿ ನೆನೆಸುತ್ತೇನೆ. ಇದರಲ್ಲಿ ಅಚ್ಚು ಹಾಕಿರುವ ಚಿತ್ರಗಳ ಬ್ಲಾಕನ್ನು ಕೊಟ್ಟ ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರಿಗೂ, ನಕಾಶವನ್ನು ಬರೆದು ಕೊಟ್ಟ ಶ್ರೀ ಆರ್. ಎಸ್. ದೇಸಾಯಿಯವರಿಗೂ, ಸಕಾಲದಲ್ಲಿ ಪುಸ್ತಕವನ್ನು ಮುದ್ರಿಸಿಕೊಟ್ಟ ಶ್ರೀ ಶಾರದಾ ಪ್ರಿಂಟಿಂಗ್ ಪ್ರೆಸ್‌ನವರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಜಿ. ಎಸ್. ದೀಕ್ಷಿತ
ಇತಿಹಾಸ ವಿಭಾಗದ
ಮುಖ್ಯಸ್ಥರು.

ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
೧೧–೫–೧೯೭೬

# ಪರಿವಿಡಿ



ವಾರಣಾಸಿ ಜಂಗಮವಾಡಿ ಮಠದಲ್ಲಿಯ ಶಿವಪ್ಪನಾಯಕನ ಚಿತ್ರ

# ಕೆಳದಿ ನಾಯಕರು

## ೧. ಪೀಠಿಕೆ

ನಮ್ಮ ದೇಶದ ಪ್ರಾಚೀನ ಇತಿಹಾಸವನ್ನು ನೈಜ ರೀತಿಯಲ್ಲಿ ಅರಿತುಕೊಳ್ಳಬೇಕಾದರೆ ಎಲ್ಲ ದೊಡ್ಡ ಮತ್ತು ಸಣ್ಣ ರಾಜ್ಯಗಳ ಚರಿತ್ರೆಗಳನ್ನು ಕೂಲಂಕುಷವಾಗಿ ಅಭ್ಯಾಸ ಮಾಡುವುದು ಅಗತ್ಯ. ಇತಿಹಾಸವು ಕೇವಲ ದೊಡ್ಡ ಸಾಮ್ರಾಜ್ಯಗಳ ಅಭ್ಯಾಸಕ್ಕೆ ಸೀಮಿತ ವಾಗಿಲ್ಲ. ಮಹಾಸಾಮ್ರಾಜ್ಯಗಳ ಸಮಗ್ರ ಇತಿಹಾಸದಲ್ಲಿ ಚಿಕ್ಕ ರಾಜ್ಯಗಳ ಚರಿತ್ರೆಗಳು ಕೊಂಡಿಗಳಿದ್ದಂತೆ. ಇಂತಹ ರಾಜ್ಯಗಳ ಚರಿತ್ರೆಗಳನ್ನು ಕಡೆಗಣಿಸುವುದೆಂದರೆ ಉದ್ದವಾದ ಸರಪಳಿಯಲ್ಲಿಯ ಅನೇಕ ಕೊಂಡಿಗಳನ್ನು ಕಳೆದುಕೊಂಡಂತೆಯೇ ಸರಿ. ಸಾಮ್ರಾಜ್ಯ ಗಳು ತಮ್ಮ ಸ್ಥಿರತೆ, ಅಭ್ಯುದಯಗಳಿಗಾಗಿ ಅಧೀನವಾಗಿದ್ದ ಪಾಳೆ ಗಾರ ನಾಯಕರ ನಿಷ್ಠೆ ಮತ್ತು ಸಹಾಯಗಳನ್ನು ಅವಲಂಬಿಸಿ ದ್ದುವು. ಈ ಮಾತಿಗೆ ವಿಜಯನಗರ ಸಾಮ್ರಾಜ್ಯದ ಇತಿಹಾಸವು ಉದಾಹರಣೆಗಳನ್ನು ಒದಗಿಸುತ್ತದೆ. ಆ ಸಾಮ್ರಾಜ್ಯದ ಇತಿಹಾಸ ಮತ್ತು ಅದರ ಪಾಳೆಗಾರ ರಾಜ್ಯಗಳ ಚರಿತ್ರೆಗಳು ಗಾಢವಾದ ಸಂಬಂಧ ಹೊಂದಿವೆ. ಅಂತಹ ಪಾಳೆಗಾರ ರಾಜ್ಯಗಳಲ್ಲಿ ಒಂದಾದ ಕೆಳದಿ ರಾಜ್ಯವು ವಿಜಯನಗರ ಸಾಮ್ರಾಜ್ಯಕ್ಕೆ ಅಮೋಘ ಸೇವೆ ಸಲ್ಲಿಸಿತು. ಆ ಸಾಮ್ರಾಜ್ಯ ಖಿಲವಾಗುತ್ತಿದ್ದ ಸಮಯದಲ್ಲಿ

ಕೆಳದಿಯ ಸುಪ್ರಸಿದ್ಧ ದೊರೆ ಶಿವಪ್ಪನಾಯಕನು ಅದನ್ನು ಪುನ ರುಜ್ಜೀವಿಸಲು ಧೀರೋದಾತ್ತ ಪ್ರಯತ್ನ ಮಾಡಿದನು.

ಕೆಳದಿ ಅರಸರು ರಾಜ್ಯಾಡಳಿತೆ, ಧಾರ್ಮಿಕಧೋರಣೆ, ಸ್ವದೇಶ ಮತ್ತು ಸ್ವಸಂಸ್ಕೃತಿಗಳ ರಕ್ಷಣೆ ಮುಂತಾದ ವಿಷಯಗಳಲ್ಲಿ ವಿಜಯನಗರ ಸಾಮ್ರಾಜ್ಯದ ಘನಪರಂಪರೆಯನ್ನು ಮುಂದುವರಿಸಿ ಕೊಂಡು ಬಂದರು. ಧರ್ಮ, ವಿದ್ಯೆ. ಕಲೆ, ಸಾಹಿತ್ಯ, ವಾಣಿಜ್ಯ ಮುಂತಾದ ರಂಗಗಳಲ್ಲಿ ಅಭಿವೃದ್ಧಿ ಸಾಧಿಸಿ, ಕರ್ನಾಟಕ ಸಂಸ್ಕೃತಿಗೆ ವಿಶಿಷ್ಟ ಕೊಡುಗೆ ಸಲ್ಲಿಸಿದರು. ಇಂತಹ ಕೆಳದಿ ಅರಸರ ಚರಿತ್ರೆ ಯನ್ನು ವಿಶದವಾಗಿ ಅರಿತುಕೊಳ್ಳಬೇಕಾದುದು ನಮ್ಮ ಕರ್ತವ್ಯ.

ಕೆಳದಿ ರಾಜ್ಯ ಎರಡೂವರೆ ಶತಮಾನಗಳಿಗಿಂತಲೂ ಹೆಚ್ಚು ಕಾಲ (ಕ್ರಿ. ಶ. ೧೫೦೦–೧೭೬೩) ಬಾಳಿ, ಬೆಳಗಿತು. ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಈ ರಾಜ್ಯವು ಈಗಿನ ಶಿವಮೊಗ್ಗಾ, ಮಂಗಳೂರು, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳ ಬಹುಭಾಗ; ಕಾರವಾರ, ಧಾರವಾಡ, ಚಿತ್ರದುರ್ಗ ಜಿಲ್ಲೆಗಳ ಕೆಲ ಭಾಗ ಮತ್ತು ಕೇರಳದ ಅತ್ಯಲ್ಪ ಭಾಗ–ಇವನ್ನೆಲ್ಲ ಒಳ ಗೊಂಡಿತ್ತು.

ಈ ರಾಜ್ಯ ಅಪಾರ ನಿಸರ್ಗ ಸಂಪತ್ತು, ಮನಮೋಹಕವಾದ ಮಲೆನಾಡಿನ ಸೌಂದರ್ಯದಿಂದ ಕಂಗೊಳಿಸುತ್ತಿತ್ತು. ಉತ್ತುಂಗ ವಾದ ಪರ್ವತಶ್ರೇಣಿ, ರಮಣೀಯವಾದ ಸಹ್ಯಾದ್ರಿ ಘಟ್ಟಪ್ರದೇಶ, ಹಸಿರೆಲೆಯ ಕಾನನ, ಹುಲ್ಲುಗಾವಲು ಪ್ರದೇಶ, ಕರಾವಳಿ ಪ್ರದೇಶ

ಮತ್ತು ನದಿಗಳಿಂದ ರಾರಾಜಿಸುತ್ತಿದ್ದ ಕೆಳದಿ ರಾಜ್ಯವು ಫ್ರೋಬ್ಸ್, ಪೀಟರ್ ಮುಂಡಿ, ಮೊದಲಾದ ವಿದೇಶಿ ಪ್ರವಾಸಿಕರ ಮನಸ್ಸನ್ನು ಸೂರೆಗೊಂಡಿದುದರಲ್ಲಿ ಆಶ್ಚರ್ಯವೇನಿಲ್ಲ.



# ೨. ಇತಿಹಾಸ ರಚನೆಯ ಸಾಧನಗಳು

ಕೆಳದಿ ಅರಸುಮನೆತನದ ಇತಿಹಾಸ ರಚನೆಗೆ ಮೂಲ ಸಾಧನಗಳ (Sources) ಕೊರತೆಯಿಲ್ಲ. ಶಾಸನಗಳು, ಸಾಹಿತ್ಯ ಕೃತಿಗಳು, ವಿದೇಶಿಯರ ಪ್ರವಾಸ ಟಿಪ್ಪಣಿಗಳು ಮತ್ತು ಕಾಗದ-ಪತ್ರಗಳು, ನಾಣ್ಯಗಳು, ಕಟ್ಟಡಗಳು ಮತ್ತು ಸ್ಮಾರಕಗಳು ಕೆಳದಿ ರಾಜ್ಯದ ಇತಿಹಾಸ ರಚನೆಯ ಸಾಧನಗಳು.

ಶಾಸನಗಳು ಕೆಳದಿ ರಾಜ್ಯದ ಇತಿಹಾಸ ಪುನರ್ರಚನೆಗೆ ತುಂಬ ಉಪಯುಕ್ತವಾಗಿವೆ. ಇವುಗಳಿಂದ ಆಯಾ ಕಾಲಗಳಲ್ಲಿ ಜರುಗಿದ ಘಟನೆಗಳ ತರ್ಕಬದ್ಧವಾದ ವಿವರಣೆ ದೊರೆಯುತ್ತದೆ. ಕೆಳದಿ ಅರಸರ ಅನೇಕ ಶಿಲಾಶಾಸನಗಳೂ ತಾಮ್ರಶಾಸನಗಳೂ ಉಪಲಬ್ಧವಿವೆ. ಎಪಿಗ್ರಾಫಿಯಾ ಕರ್ನಾಟಿಕಾ, ಎಪಿಗ್ರಾಫಿಯಾ ಇಂಡಿಕಾ, ದಕ್ಷಿಣ ಭಾರತದ ಶಾಸನಗಳು, ಮೈಸೂರು ಆರ್ಕಿಯಾ-ಲಾಜಿಕಲ್ ರಿಪೋರ್ಟ್, ಆನ್ಯುಯಲ್ ರಿಪೋರ್ಟ್ ಆನ್ ಸೌಥ್ ಇಂಡಿಯನ್ ಎಪಿಗ್ರಾಫಿ, ಆನ್ಯುಯಲ್ ರಿಪೋರ್ಟ್ ಆಫ್ ದಿ ಆರ್ಕಿಯಾಲಾಜಿಕಲ್ ಸರ್ವೆ ಆಫ್ ಇಂಡಿಯಾ—ಇವುಗಳಲ್ಲಿ ಕೆಳದಿ ಅರಸರಿಗೆ ಸಂಬಂಧಿಸಿದ ಶಾಸನಗಳನ್ನು ಪ್ರಕಟಿಸಲಾಗಿದೆ. ಸಾಗರ, ಸೊರಬ, ನಗರ, ತೀರ್ಥಹಳ್ಳಿ ಮತ್ತು ಶಿವಮೊಗ್ಗಾ ಜಿಲ್ಲೆಯ ಇತರ ತಾಲೂಕುಗಳಲ್ಲಿ ಈ ಅರಸರ ಶಾಸನಗಳು ಬಹು

ದೊಡ್ಡ ಸಂಖ್ಯೆಯಲ್ಲಿ ದೊರೆತಿವೆ. ಶಾಸನಗಳು ಆ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಜೀವನದ ಮೇಲೆ ಬೆಳಕು ಚೆಲ್ಲುತ್ತವೆ. ಇವುಗಳಿಂದ ದೊರೆಯುವ ಮಾಹಿತಿಯು ಬಹುಮಟ್ಟಿಗೆ ನಂಬಲರ್ಹವಾಗಿದೆ. ಶಾಸನಗಳು ಆ ಕಾಲದಲ್ಲಿದ್ದ ಸಂಸ್ಥೆಗಳ ಬಗೆಗೆ ನಮಗೆ ಸರಿಯಾದ ಕಲ್ಪನೆ ತಂದುಕೊಡುತ್ತವೆ; ಕಂದಾಯ, ತೂಕ–ಮಾಪನ ಪದ್ಧತಿ ಮತ್ತು ನಾಣ್ಯಗಳ ಬಗೆಗೆ ಮಾಹಿತಿ ಒದಗಿಸುತ್ತವೆ; ಆಯಾ ಅರಸರ ಕಾಲದಲ್ಲಿ ಕೆಲಸ ಮಾಡಿದ ಅಧಿಕಾರಿಗಳ ಮತ್ತು ಅವರ ಹುದ್ದೆಗಳ ಹೆಸರುಗಳನ್ನು ಸೂಚಿಸುತ್ತವೆ.

ಕೆಳದಿ ಅರಸರ ಇತಿಹಾಸ ರಚನೆಗೆ ಸಹಾಯವಾಗುವ ಸಾಹಿತ್ಯ ಕೃತಿಗಳಲ್ಲಿ 'ಶಿವತತ್ವರತ್ನಾಕರ' ಮತ್ತು 'ಕೆಳದಿನೃಪ ವಿಜಯ' ಎಂಬೆರಡು ಗ್ರಂಥಗಳು ಬಹು ಮುಖ್ಯವಾದುವು. ೧೪ನೆಯ ದೊರೆಯಾದ ಹಿರಿಯ ಬಸವಪ್ಪನಾಯಕನು ಕ್ರಿ. ಶ. ೧೭೦೯ರಲ್ಲಿ 'ಶಿವತತ್ವರತ್ನಾಕರ' ಎಂಬ ಉದ್ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿದನು. ಈ ಮಹಾಕೃತಿಯು ಒಂದು ವಿಶ್ವಕೋಶ. ೯ ಕಲ್ಲೋಲಗಳುಳ್ಳ ಈ ಗ್ರಂಥವನ್ನು ೧೦೮ ತರಂಗಗಳಲ್ಲಿ ವಿಭಾಗಿಸಲಾಗಿದೆ. ಇದರಲ್ಲಿ ಕೆಳದಿ ಅರಸುಮನೆತನದ ಚರಿತ್ರೆಯಲ್ಲದೆ, ಸಂಗೀತ, ನೃತ್ಯ, ನಾಟಕ, ಸಾಹಿತ್ಯ, ಖಗೋಲಶಾಸ್ತ್ರ, ತೋಟಗಾರಿಕೆ, ಯೋಗ, ಧರ್ಮ, ತತ್ವಜ್ಞಾನ ಮುಂತಾದ ವಿಷಯಗಳ ವಿವೇಚನೆ ಬಂದಿದೆ. ಕೆಳದಿ ಅರಸರು ತಮ್ಮ ಉತ್ತರಾಧಿಕಾರಿಗಳಿಗೆ ರಾಜನೀತಿಯ ಬಗೆಗೆ ಕೊಟ್ಟ ಉಪದೇಶವನ್ನು ಈ ಗ್ರಂಥವು ಒಳಗೊಂಡಿರುತ್ತದೆ.

ಲಿಂಗಣ್ಣನೆಂಬ ಬ್ರಾಹ್ಮಣ ಕವಿ ಕನ್ನಡದಲ್ಲಿ ರಚಿಸಿದ 'ಕೆಳದಿ ನೃಪವಿಜಯ' ಎಂಬ ಚಂಪೂಗ್ರಂಥ ಐತಿಹಾಸಿಕ ದೃಷ್ಟಿಯಿಂದ ಬಹು ಮಹತ್ವದ್ದಾಗಿದೆ. ಈ ಕೃತಿಯು ಕ್ರಿ. ಶ. ೧೭೬೩-೧೮೦೪ ಈ ಕಾಲಾವಧಿಯಲ್ಲಿ ರಚಿತವಾಗಿರಬಹುದೆಂದು ತೋರುತ್ತದೆ. ಈ ಗ್ರಂಥದಲ್ಲಿ ಕಾವ್ಯಾಂಶಕ್ಕಿಂತಲೂ ಚರಿತ್ರಾಂಶವೇ ಹೆಚ್ಚಾಗಿದೆ. ಐತಿಹಾಸಿಕ ಘಟನೆಗಳನ್ನು ಇಷ್ಟು ಯಥಾರ್ಥವಾಗಿ ನಿರೂಪಿಸುವ ಸಾಹಿತ್ಯ ಕೃತಿಯು ಕನ್ನಡ ಭಾಷೆಯಲ್ಲಿಯೇ ಇಲ್ಲವೆನ್ನಬಹುದು. ಕೆಳದಿ ನೃಪ ವಿಜಯದಲ್ಲಿ ಪ್ರಾಸಂಗಿಕವಾಗಿ ವಿಜಯನಗರದ ಅರಸರ, ಬಹಮನಿ ಸುಲ್ತಾನರ, ದಿಲ್ಲಿ ಸಾಮ್ರಾಟರ, ಮರಾಠಾ ದೊರೆಗಳ, ಚಿತ್ರದುರ್ಗದ ನಾಯಕರ ವಿಷಯ ಬಂದಿದೆ. ಕೆಳದಿ ಸಂಸ್ಥಾನದ ಉದಯದಿಂದ ಆರಂಭಿಸಿ ಕ್ರಿ. ಶ. ೧೭೬೩ ರಲ್ಲಿ ಆ ರಾಜ್ಯ ಪರಿಸಮಾಪ್ತಿಗೊಳ್ಳುವ ವರೆಗೆ ನಡೆದ ಇತಿಹಾಸವನ್ನು ಲಿಂಗಣ್ಣ ಕವಿ ಬಹು ಅಚ್ಚುಕಟ್ಟಾಗಿ ನಿರೂಪಿಸಿದ್ದಾನೆ. ಶಾಸನಗಳನ್ನು ನೋಡಿದರೆ ಕೆಳದಿನೃಪವಿಜಯದಲ್ಲಿ ಹೇಳಿರುವ ಕೆಳದಿ ಅರಸರ ಕಾಲಕಾರ್ಯಾದಿಗಳು ಸತ್ಯವೆಂದು ಹೇಳಬೇಕಾಗುತ್ತದೆಂದು ಎ. ಆರ್. ಕೃಷ್ಣಶಾಸ್ತ್ರಿಗಳು ಅಭಿಪ್ರಾಯ ಪಟ್ಟಿದ್ದಾರೆ. ರೈಸ್ ಮುಂತಾದ ವಿದ್ವಾಂಸರೂ ಇದನ್ನು ಒಪ್ಪಿಕೊಂಡಿದ್ದಾರೆ. ಮೊದಮೊದಲಿನ ಆಶ್ವಾಸಗಳಲ್ಲಿ ಕಾಲ ಮತ್ತು ಘಟನೆಗಳ ಬಗೆಗೆ ಕೆಲವು ತಪ್ಪುಗಳುಂಟಾಗಿವೆಯಾದರೂ ಅನಂತರದ ಆಶ್ವಾಸಗಳಲ್ಲಿ ಕೆಳದಿ ಅರಸರ ಕಾಲ ಕಾರ್ಯಾದಿಗಳನ್ನು ಯಥಾರ್ಥವಾಗಿ ವಿವರಿಸಲಾಗಿದೆ.

ಕೆಳದಿ ಅಸಸುಮನೆತನಕ್ಕೆ ಸಂಬಂಧಿಸಿದ ಅನೇಕ ಜನಜನಿತ ಕಥೆಗಳೂ ಐತಿಹ್ಯಗಳೂ ಇವೆ. ಈ ಮುಂದೆ ಕಾಣಿಸಿದ ದಾಖಲೆಗಳು ಕೆಳದಿ ರಾಜ್ಯದ ಇತಿಹಾಸ ರಚನೆಗೆ ಕೆಲಮಟ್ಟಿಗೆ ಉಪಯುಕ್ತವಾಗಿವೆ : 'ಕೆಳದಿ ಅರಸರ ವಂಶಾವಳಿ', 'ಇಕ್ಕೇರಿ ಅರಸರ ವಂಶಾವಳಿ', 'ಇಕ್ಕೇರಿ ಅರಸರ ಪೀಳಿಗೆ', 'ಬೀಗಿ ಅರಸರ ವಂಶಾವಳಿ', 'ಕಂಠೀರವ ನರಸರಾಜ ವಿಜಯ' ಮತ್ತು ಕೈಫಿಯತ್‌ಗಳು – (ಉಡುಗಣೆ ಕೈಫಿಯತ್, ಕೆನರಾ ಕೈಫಿಯತ್, ಹೈದರ ಕೈಫಿಯತ್ ಇತ್ಯಾದಿ).

ಬ್ರಿಟಿಷ್ ಮತ್ತು ಪೋರ್ತುಗೀಜ ಅಧಿಕಾರಿಗಳು ತಮ್ಮ ದೇಶೀಯ ವರಿಷ್ಠರಿಗೆ ಬರೆದ ಪತ್ರಗಳು ಮತ್ತು ವರದಿಗಳು, ಕೆಳದಿ ಅರಸರ ಮತ್ತು ವಿದೇಶಿಯರ ನಡುವೆ ಜರುಗಿದ ಒಪ್ಪಂದಗಳು ಮತ್ತು ವಿದೇಶಿ ಪ್ರವಾಸಿಕರ ಟಿಪ್ಪಣಿಗಳು ಕೆಳದಿ ರಾಜ್ಯದ ಇತಿಹಾಸ ರಚನೆಗೆ ಉಪಯುಕ್ತ ಸಾಧನಗಳಾಗಿವೆ. ಶಾಸನ ಮತ್ತು ಸಾಹಿತ್ಯ ಮೂಲಗಳಿಂದ (Sources) ದೊರೆತ ಮಾಹಿತಿಯ ಸತ್ಯತೆಯನ್ನು ದೃಢಪಡಿಸಲು ವಿದೇಶಿ ಮೂಲಗಳು ತುಂಬ ಸಹಾಯಕವಾಗಿವೆ.

ವಿದೇಶಿಯರ ದಾಖಲೆಗಳಿಂದ ಕೆಳದಿ ರಾಜ್ಯದ ಪ್ರಾಕೃತಿಕ ಸ್ವರೂಪ, ದರ್ಬಾರಿನ ಜೀವನ, ಆಡಳಿತ ವ್ಯವಸ್ಥೆ, ಪ್ರಜೆಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಸೈನ್ಯ ಸಂಘಟನೆ, ಪ್ರಮುಖ ಪಟ್ಟಣಗಳು, ವಾಣಿಜ್ಯ ಸಂಬಂಧಗಳು ಮುಂತಾದ ಅಂಶಗಳ ಬಗೆಗೆ ಸಾಕಷ್ಟು ಮಾಹಿತಿ ದೊರಕುತ್ತದೆ. ಕೆಳದಿ ರಾಜ್ಯದಲ್ಲಿ ವಿಪುಲವಾಗಿ ಬೆಳೆಯುತ್ತಿದ್ದ ಅಕ್ಕಿ, ಏಲಕ್ಕಿ, ಮೆಣಸು,

ಮೆಣಸಿನಕಾಯಿ. ಮತ್ತಿತರ ಮಸಾಲೆ ಸಾಮಾನುಗಳ ವ್ಯಾಪಾರವು ಪಶ್ಚಿಮ ಕರಾವಳಿ ಪ್ರದೇಶದಲ್ಲಿ ಭರದಿಂದ ಸಾಗುತ್ತಿತ್ತೆಂಬುದು ವಿದೇಶಿ ಮೂಲಗಳಿಂದ ತಿಳಿದು ಬರುತ್ತದೆ. ಇಂಗ್ಲೀಷ್ ಫ್ಯಾಕ್ಟರಿ ರೆಕಾರ್ಡುಗಳು ಮತ್ತು ತೆಲ್ಲಿಚೆರಿ. ಕಾರವಾರ, ಮುಂಬೈಗಳಿಂದ ನಡೆಯುತ್ತಿದ್ದ ವಿದೇಶಿಯರ ಪತ್ರವ್ಯವಹಾರಗಳಿಂದ ಕೆಳದಿ ರಾಜ್ಯ ಮತ್ತು ವಿದೇಶಿಯರ ನಡುವಣ ವ್ಯಾಪಾರ ಸಂಬಂಧದ ಬಗೆಗೆ ವಿವರಗಳು ದೊರೆಯುತ್ತವೆ.

ಪೆಟ್ರೊ ಡೆಲಾ ವೆಲ್ಲೆ, ಪೀಟರ್ ಮುಂಡಿ. ಡಾ. ಫ್ರೈರ್. ಪಿಂಕರ್ಟನ್. ಅಬೆ ಕೆರಿ ಮುಂತಾದ ವಿದೇಶಿ ಪ್ರವಾಸಿಗಳ ಟಿಪ್ಪಣೆಗಳಲ್ಲಿ ಕೆಳದಿ ರಾಜ್ಯದ ಬಗೆಗೆ ಸತ್ಯಾಂಶಗಳು ಮೂಡಿವೆ.

ಫೆರಿಷ್ತಾ ಎಂಬ ಗ್ರಂಥಕರ್ತನ ದಕ್ಷಿಣ ದೇಶದ ಮುಸಲ್ಮಾನರ ಚರಿತ್ರೆ ಮತ್ತು ಪೇಶ್ವೆ ದಫ್ತರಗಳು ಈ ರಾಜ್ಯದ ಇತಿಹಾಸ ರಚನೆಗೆ ಕೆಲಮಟ್ಟಿಗೆ ಉಪಯುಕ್ತವಾಗಿವೆ.

ಕೆಳದಿ ಅರಸರು ಕಟ್ಟಿಸಿದ ಸ್ಮಾರಕಗಳು. ದೇವಾಲಯಗಳು. ಅರಮನೆಗಳು. ಕೋಟೆಗಳು ಇಂದು ಹಾಳು ಬಿದ್ದಿದ್ದರೂ ತಮ್ಮ ಕಥೆಯನ್ನು ಚಿತ್ರಿಸುತ್ತಲಿವೆ. ಸುಪ್ರಸಿದ್ಧ ಇಕ್ಕೇರಿ ವರಹಗಳು ಆ ಕಾಲದ ಸುಭದ್ರ ಆರ್ಥಿಕ ಸ್ಥಿತಿಯ ದ್ಯೋತಕವಾಗಿವೆ. ಈ ವರಹಗಳು ಶುದ್ಧ ಚಿನ್ನದಿಂದ ತಯಾರಿಸಲ್ಪಟ್ಟಿದ್ದುವು.



# ೩. ಕೆಳದಿ ರಾಜ್ಯೋದಯ

ಕೆಳದಿ ಸಂಸ್ಥಾನದ ಉದಯವನ್ನು ಕುರಿತು ಭಿನ್ನಾಭಿಪ್ರಾಯ ಗಳನ್ನು ಹೊಂದಿದ ಅನೇಕ ಐತಿಹ್ಯಗಳಿವೆ. ಸಾಗರ ತಾಲೂಕಿನಲ್ಲಿ ಹಳ್ಳಿಬೈಲು ಎಂಬಲ್ಲಿ ವಾಸಿಸುತ್ತಿದ್ದ ಚೌಡಪ್ಪ, ಭದ್ರಪ್ಪ ಎಂಬ ಸಹೋದರರಿಗೆ ದೈವಯೋಗದಿಂದ ಭಾರಿ ನಿಕ್ಷೇಪ ದೊರೆತದ್ದೇ ಕೆಳದಿ ರಾಜ್ಯ ಸಂಸ್ಥಾಪಕರ ಪ್ರಾಬಲ್ಯಕ್ಕೆ ಮೂಲಕಾರಣವೆಂದು 'ಶಿವತತ್ತ್ವ ರತ್ನಾಕರ' ಮತ್ತು 'ಕೆಳದಿನೃಪವಿಜಯ' ಗ್ರಂಥಗಳಲ್ಲಿ ಹೇಳಲಾಗಿದೆ. ಇವರ ತಂದೆ ಬಸಪ್ಪ, ತಾಯಿ ಬಸವಮಾಂಬೆ. ತುರುಷ್ಕರು (ಮುಸಲ್ಮಾನರು), ಮತ್ತು ಕೆಲವು ಪಾಳೆಗಾರರು ವಿರೋಧಿಗಳಾಗಿ ವಿಜಯನಗರ ಸಾಮ್ರಾಜ್ಯಕ್ಕೆ ಕಿರುಕಳ ಕೊಡುತ್ತಿದ್ದ ಆ ಕಾಲದಲ್ಲಿ ವಿಜಯನಗರದ ಸಾಮ್ರಾಟನು ಪ್ರಬಲರಾಗುತ್ತಿದ್ದ ಚೌಡಪ್ಪ, ಭದ್ರಪ್ಪ ಸಹೋದರರನ್ನು ತನ್ನ ಒಡ್ಡೋಲಗಕ್ಕೆ ಕರೆಸಿಕೊಂಡು, 'ನೀವೆಮ್ಮಕಜ್ಜಂಗಳಿಗನುಕೂಲಿಗಳಾಗಿ ಸಮೀಪದೊಳಿರಲ್ವೇಳ್ಕೆಂದು' ಅವರಿಗೆ ಕೇಳಿಕೊಂಡನೆಂದು ಕೆಳದಿನೃಪ ವಿಜಯದಲ್ಲಿ ಹೇಳಲಾಗಿದೆ. ಸಹೋದರರು ಸಾಮ್ರಾಜ್ಯಕ್ಕೆ ಉಪದ್ರವ ಕೊಡುತ್ತಿದ್ದ ಮತ್ತು ಚಿಕ್ಕ ಪಾಳೆಗಾರರನ್ನು ಸೋಲಿಸಿ, ಅನೇಕರನ್ನು ಸೆರೆಹಿಡಿದು ರಾಯನಿಗೆ ಒಪ್ಪಿಸಿದರು. ಇದರಿಂದ ಸಂಪ್ರೀತನಾದ ರಾಯನು ಆ ಸಹೋದರರಿಗೆ ಅನೇಕ ಬಹುಮಾನಗಳನ್ನಿತ್ತು ಸನ್ಮಾನಿಸಿದನು.

ಕೆಲಕಾಲದ ನಂತರ ವಿಜಯನಗರದ ಸಾಮ್ರಾಟನು ತುರುಷ್ಕರ ದಾಳಿಯ ಸಂಭವವನ್ನು ಅನುಲಕ್ಷಿಸಿ. ಚೌಡಪ್ಪ ಮತ್ತು ಭದ್ರಪ್ಪರನ್ನು ಉತ್ತರಗಡಿಯ ರಕ್ಷಣೆಗೆ ನೇಮಿಸಿದನು. ಆಗ ರಾಯನು ಚಂದ್ರಗುತ್ತಿ, ಕೆಳದಿ, ಇಕ್ಕೇರಿ. ಪೆರ್ಬಯಲು. ಎಲಗಳಲೆ, ಮೋದೂರು, ಕಲಿಸೆ ಮತ್ತು ಲಾತವಾಡಿ ಎಂಬ ಎಂಟು ಮಾಗಣಿಗಳನ್ನು ಅವರಿಗೆ ಕೊಟ್ಟು, ಅವುಗಳನ್ನು ವಂಶಪಾರಂಪರ್ಯವಾಗಿ ಉಪಭೋಗಿಸುತ್ತ ವಿಜಯನಗರದ ರಾಯರಿಗೆ ಸಹಾಯಕರಾಗಿರತಕ್ಕದ್ದೆಂದು ಶಾಸನ ಬರೆಸಿದನು. ಚೌಡಪ್ಪನಿಗೆ ರಾಯಸ ಬರೆಸುವ, ನಾಣ್ಯ ಹಾಕಿಸುವ ಅಧಿಕಾರಗಳೂ ದೊರೆತವು. ಅವನು ಕೆಳದಿ ಮೂಲ ಸಂಸ್ಥಾನದ ಚೌಡಪ್ಪನೆಂದು ಹೆಸರಾದನು. ಕ್ರಿ. ಶ. ೧೫೦೦ ನೆಯ ಜನೇವರಿ ೮ ರಂದು ( ಶಾ. ಶಕೆ. ೧೪೨೨ ನೆಯ ಸಿದ್ಧಾರ್ಥಿ ಸಂವತ್ಸರ ಮಾಘ ಶುದ್ಧ ೩ ರಲ್ಲಿ ) ಚೌಡಪ್ಪನಿಗೆ ಕೆಳದಿಪುರದರಮನೆಯಲ್ಲಿ ರಾಜಪಟ್ಟವಾಯಿತೆಂದು ಕೆಳದಿ ನೃಪ ವಿಜಯದಲ್ಲಿ ಹೇಳಿದೆ.

ಹೀಗೆ, ವಿಜಯನಗರ ಸಾಮ್ರಾಜ್ಯದ ಶತ್ರುಗಳನ್ನು ನಿಗ್ರಹಿಸುವ ದೃಷ್ಟಿಯಿಂದ ಹೊಸದಾಗಿ ಏರ್ಪಾಡಾದ ಪಾಳೆಗಾರ ಸಂಸ್ಥಾನಗಳಲ್ಲಿ ಕೆಳದಿ ಸಂಸ್ಥಾನ ಒಂದಾಗಿತ್ತು. ಆ ಸಾಮ್ರಾಜ್ಯಕ್ಕೆ ಸೇವೆ ಸಲ್ಲಿಸಿದ ಚೌಡಪ್ಪನು ಕೆಳದಿ ಸಂಸ್ಥಾನದ ಉದಯಕ್ಕೆ ಕಾರಣೀಭೂತನು.

ಚೌಡಪ್ಪನು ಕೆಳದಿಯಲ್ಲಿ ಆಡಳಿತದ ಏರ್ಪಾಡಗಳನ್ನು ಮಾಡಿದನು. ಆ ಪುರದಲ್ಲಿ ರಾಮೇಶ್ವರ ಲಿಂಗವನ್ನು ಪ್ರತಿಷ್ಠೆ

ಮಾಡಿ, ಮರದ ದೇವಾಲಯವನ್ನು ಕಟ್ಟಿಸಿದನು. ಇವನು ಅಪ್ಪಟ ಶಿವಭಕ್ತನಾಗಿದ್ದನು. ಈತನೇ ಇಕ್ಕೇರಿ ಪಟ್ಟಣವನ್ನು ಸ್ಥಾಪಿಸಿದನೆಂದು ಕೆಳದಿನೃಪವಿಜಯದಲ್ಲಿ ಹೇಳಲಾಗಿದೆ.

ಚೌಡಪ್ಪನಿಗೆ ಸದಾಶಿವ, ಭದ್ರಪ್ಪರೆಂಬ ಇಬ್ಬರು ಮಕ್ಕಳಿದ್ದರು. ಅವರು ತಮ್ಮ ತಂದೆಯ ಕಾಲದಲ್ಲಿ ಕೆಳದಿ ರಾಜ್ಯಾಡಳಿತೆಯಲ್ಲಿ ಭಾಗವಹಿಸಿದ್ದರು. ಚೌಡಪ್ಪನು ಕ್ರಿ. ಶ. ೧೫೦೦ ರಿಂದ ೧೫೪೦ ರ ವರೆಗೆ ರಾಜ್ಯಭಾರ ಮಾಡಿದನೆಂದು ತೋರುತ್ತದೆ.



# ೪. ಕೆಳದಿ ರಾಜ ವಂಶಾವಳಿ

ಚೌಡಪ್ಪನಿಂದ ಆರಂಭಿಸಿ, ಈ ವಂಶದ ಆಧಿಪತ್ಯವು ಕ್ರಿ. ಶ. ೧೭೬೩ ರಲ್ಲಿ ಹೈದರ ಅಲಿಯ ದಾಳಿಗೆ ತುತ್ತಾಗಿ ನಾಶ ಹೊಂದುವ ವರೆಗೆ ಕೆಳದಿ ರಾಜಮನೆತನದ ಹದಿನೆಂಟು ದೊರೆಗಳು ರಾಜ್ಯಭಾರ ಮಾಡಿದರು. ಕೆಳದಿ ರಾಜವಂಶಾವಳಿ ಇಂತಿದೆ :

| | | |
|---|---|---|
| ೧) | ಚೌಡಪ್ಪ | ಸು. ಕ್ರಿ. ಶ. ೧೫೦೦ – ೧೫೩೦ |
| ೨) | ಸದಾಶಿವನಾಯಕ | ೧೫೪೪ – ೧೫೬೫ |
| ೩) | ದೊಡ್ಡ ಸಂಕಣ್ಣನಾಯಕ | ೧೫೬೬ – ? |
| ೪) | ಚಿಕ್ಕ ಸಂಕಣ್ಣನಾಯಕ | ೧೫೭೦ – ೧೫೮೦ |
| ೫) | ರಾಮರಾಜನಾಯಕ | ೧೫೭೦ – ೧೫೮೨ |
| ೬) | ಹಿರಿಯ ವೆಂಕಟಪ್ಪನಾಯಕ | ೧೫೮೨ – ೧೬೨೯ |
| ೭) | ವೀರಭದ್ರನಾಯಕ | ೧೬೨೯ – ೧೬೪೫ |
| ೮) | ಶಿವಪ್ಪನಾಯಕ | ೧೬೪೫ – ೧೬೬೦ |
| ೯) | ಕಿರಿಯ ವೆಂಕಟಪ್ಪನಾಯಕ | ೧೬೬೦ – ೧೬೬೧ |
| ೧೦) | ಭದ್ರಪ್ಪನಾಯಕ | ೧೬೬೧ – ೧೬೬೩ |
| ೧೧) | ಹಿರಿಯ ಸೋಮಶೇಖರನಾಯಕ | ೧೬೬೩ – ೧೬೭೧ |
| ೧೨) | ಚೆನ್ನಮ್ಮಾಜಿ | ೧೬೭೧ – ೧೬೯೭ |

| | | |
|---|---|---|
| ೧೩) | ಹಿರಿಯ ಬಸವಪ್ಪನಾಯಕ (ದತ್ತುಮಗ) | ೧೬೯೭ – ೧೭೧೪ |
| ೧೪) | ಕಿರಿಯ ಸೋಮಶೇಖರನಾಯಕ | ೧೭೧೪ – ೧೭೩೯ |
| ೧೫) | ಕಿರಿಯ ಬಸವನಾಯಕ | ೧೭೩೯ – ೧೭೫೫ |
| ೧೬) | ಚೆನ್ನಬಸವನಾಯಕ (ದತ್ತುಮಗ) | ೧೭೫೫ – ೧೭೫೭ |
| ೧೭) | ವೀರಮ್ಮಾಜಿ | ೧೭೫೭ – ೧೭೬೩ |
| ೧೮) | ಮುಮ್ಮಡಿ ಸೋಮಶೇಖರನಾಯಕ | |

ಮೊದಮೊದಲಿನ ದೊರೆಗಳ ಕಾಲಾವಧಿಯ ಬಗೆಗೆ ನಿರ್ದಿಷ್ಟ ಪುರಾವೆಗಳಿಲ್ಲದ್ದರಿಂದ ಚರಿತ್ರೆಕಾರರು ಆ ದೊರೆಗಳ ಸಂಬಂಧವಾಗಿ ಬೇರೆ ಬೇರೆ ಕಾಲಗಳನ್ನು ಸೂಚಿಸಿದ್ದಾರೆ. ಬಹುಮಟ್ಟಿಗೆ ಸಮಂಜಸವಾದ ಕಾಲಸೂಚಿಯನ್ನು ಇಲ್ಲಿ ಕೊಡಲಾಗಿದೆ.

### ಕೆಳದಿ ಆಳ್ವಿಕೆಯ ಮುನ್ನೋಟ :

ಚೌಡಪ್ಪನಾಯಕನ ತರುವಾಯ ಆತನ ಮಗ ಸದಾಶಿವ ನಾಯಕನು ದೊರೆಯಾದನು. ಈತನು ಕೆಳದಿ ಸಂಸ್ಥಾನದ ಬುನಾದಿಯನ್ನು ಭದ್ರಪಡಿಸಿದನು. ಆದ್ದರಿಂದ ಸದಾಶಿವ ನಾಯಕನೇ ಕೆಳದಿ ರಾಜ್ಯದ ನಿಜವಾದ ಸಂಸ್ಥಾಪಕನೆಂದು ಹೇಳಬಹುದು. ಈತನ ಕಾಲದಲ್ಲಿ ಈ ರಾಜ್ಯವು ಅಭ್ಯುದಯಕ್ಕೆ ಬಂದಿತು. ಕೆಳದಿ ಅರಸುಮನೆತನದ ಕೀರ್ತಿಧ್ವಜವನ್ನು ಮೇಲಕ್ಕೇರಿಸಿದ ಶ್ರೇಯಸ್ಸು ಆರನೆಯ ದೊರೆ ಹಿರಿಯ ವೆಂಕಟಪ್ಪನಾಯಕನಿಗೆ ಸಲ್ಲುತ್ತದೆ. ಇವನ ಆಳಿಕೆಯಲ್ಲಿ ಕೆಳದಿ ಸ್ವತಂತ್ರ ರಾಜ್ಯವೆಂದು ಪಶ್ಚಿಮ ತೀರ ಪ್ರದೇಶದ ಎಲ್ಲ ಪಾಳೆಗಾರರಿಂದ ಪರಿಗಣಿಸಲ್ಪಟ್ಟಿತು. ಹೀಗೆ ಪ್ರವರ್ಧಮಾನವಾಗುತ್ತ ಬಂದ ಕೆಳದಿ

ರಾಜ್ಯ ಎಂಟನೆಯ ದೊರೆಯಾದ ಶಿವಪ್ಪನಾಯಕನ ಆಳಿಕೆಯಲ್ಲಿ ತನ್ನ ಶಕ್ತಿ ಮತ್ತು ವೈಭವಗಳ ಶಿಖರವನ್ನು ಮುಟ್ಟಿತು. ಇವನು ಕೆಳದಿ ಅರಸರಲ್ಲಿಯೇ ಅತ್ಯಂತ ಪ್ರಸಿದ್ಧನು.

ಕೆಳದಿ ಅರಸುಮನೆತನದಲ್ಲಿ ಚೆನ್ನಮ್ಮಾಜಿ, ವೀರಮ್ಮಾಜಿ ಎಂಬ ಇಬ್ಬರು ಸಮರ್ಥ ರಾಣಿಯರು ಆಗಿ ಹೋದುದು ಗಮನಾರ್ಹವಾದ ಸಂಗತಿ. ಕೆಳದಿ ರಾಜ್ಯವು ಗಂಡಾಂತರ ಪರಿಸ್ಥಿತಿಯಲ್ಲಿದ್ದಾಗ ಪಟ್ಟಕ್ಕೆ ಬಂದ ಈ ರಾಣಿಯರು ತಮ್ಮ ಅಸಾಧಾರಣ ವ್ಯಕ್ತಿತ್ವದಿಂದ ರಾಜ್ಯ ರಕ್ಷಣೆ ಮಾಡಲು ಹೆಣಗಾಡಿದರು. ಚೆನ್ನಮ್ಮಾಜಿ (೧೬೭೧–೧೬೯೭) ಬಲಾಢ್ಯನಾಗಿದ್ದ ಔರಂಗಜೇಬನನ್ನು ಪ್ರತಿಭಟಿಸಿ ನಿಂತು, ಮೊಗಲ ಸೈನ್ಯವನ್ನು ಸೋಲಿಸಿದಳು. ಈ ಅರಸುಮನೆತನದ ಕೊನೆಯ ಪ್ರಭುವಾದ ರಾಣಿ ವೀರಮ್ಮಾಜಿ (೧೭೫೭–೧೭೬೩) ದುರ್ಭರ ಪ್ರಸಂಗಗಳನ್ನು ಎದುರಿಸಬೇಕಾಯಿತು. ೧೭೬೩ ರಲ್ಲಿ ಹೈದರ ಅಲಿಯ ದಾಳಿಗೀಡಾಗಿ ಕೆಳದಿ ರಾಜ್ಯ ಪತನ ಹೊಂದಿತು.

ಕೆಳದಿಯ ಪ್ರಮುಖ ಅರಸರ ಮಹತ್ಸಾಧನೆಗಳನ್ನು ಮುಂದೆ ವಿವರಿಸಲಾಗಿದೆ. ಅದಕ್ಕೂ ಮೊದಲು ಅವರ ರಾಜಧಾನಿಗಳ ಬಗೆಗೆ ನಾಲ್ಕು ಮಾತು ಅವಶ್ಯಕ.



## ೫. ಕೆಳದಿ, ಇಕ್ಕೇರಿ, ಬಿದನೂರು

ಕೆಳದಿ, ಇಕ್ಕೇರಿ, ಬಿದನೂರು ಇವು ಶಿವಮೊಗ್ಗಾ ಜಿಲ್ಲೆಯಲ್ಲಿರುವ ಗ್ರಾಮಗಳು. ಇವು ಅನುಕ್ರಮವಾಗಿ ಕೆಳದಿ ರಾಜ್ಯದ ರಾಜಧಾನಿಗಳಾಗಿದ್ದುವು. ಕೆಳದಿ ವಿಜಯನಗರದ ಚಕ್ರವರ್ತಿಯು ಚೌಡಪ್ಪನಿಗೆ ದಯಪಾಲಿಸಿದ್ದ ಎಂಟು ಮಾಗಣೆಗಳಲ್ಲೊಂದು. ಚೌಡಪ್ಪ ಕೆಳದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ನಂತರ ಅಲ್ಲಿ ರಾಮೇಶ್ವರ ದೇವಾಲಯ ಮತ್ತು ಒಂದು ಕೋಟೆಯನ್ನು ಕಟ್ಟಿಸಿದನು. ಕೆಳದಿ ಬಹುಕಾಲ ರಾಜಧಾನಿಯಾಗಿರಲಿಲ್ಲ. ಚೌಡಪ್ಪನಾಯಕನ ಕಾಲದಲ್ಲಿಯೇ ರಾಜಧಾನಿಯು ಕೆಳದಿಯಿಂದ ಇಕ್ಕೇರಿಗೆ ಸ್ಥಳಾಂತರಿಸಲ್ಪಟ್ಟಿತೆಂದು ಕೆಳದಿನೃಪವಿಜಯದಲ್ಲಿ ಹೇಳಲಾಗಿದೆ, ಹೀಗಿದ್ದರೂ. ಈ ಅರಸುಮನೆತನದ ದೊರೆಗಳು ಕೆಳದಿ ದೊರೆಗಳೆಂದೇ ಹೇಳಿಕೊಳ್ಳುತ್ತಿದ್ದರು. ಈ ದೊರೆಗಳು ಯಾವ ಶಾಸನದಲ್ಲಿಯೂ ಇಕ್ಕೇರಿಯ ಅಥವಾ ಬಿದನೂರಿನ ದೊರೆಗಳೆಂದು ಉಲ್ಲೇಖಿಸಲ್ಪಟ್ಟಿಲ್ಲ. ಆದ್ದರಿಂದ ಈ ಅರಸರಿಗೆ 'ಕೆಳದಿ ಅರಸರು' ಎಂದು ಕರೆಯುವದು ಉಚಿತ.

ಇಕ್ಕೇರಿ, ಕೆಳದಿ ಅರಸರ ಎರಡನೆಯ ರಾಜಧಾನಿ, ಇದು ಈಗ ಸಾಗರದ ದಕ್ಷಿಣಕ್ಕಿರುವ ಒಂದು ಸಣ್ಣ ಹಳ್ಳಿ. ಇಕ್ಕೇರಿಯಲ್ಲಿ ಚೌಡಪ್ಪನಾಯಕನು ಒಂದು ಮೊಲವು ನಾಯಿಯನ್ನು ಬೆಂಬತ್ತಿ ಹೋದುದನ್ನು ಕಂಡನಂತೆ. ಆ ಸ್ಥಳವು ಪುಣ್ಯಭೂಮಿಯೆಂದು

ಭಾವಿಸಿ ಚೌಡಪ್ಪ ತನ್ನ ರಾಜಧಾನಿಯನ್ನು ಕೆಳದಿಯಿಂದ ಇಕ್ಕೇರಿಗೆ ಬದಲಾಯಿಸಿದನೆಂದು ಲಿಂಗಣ್ಣ ಕವಿ ಬರೆದಿದ್ದಾನೆ. ಆ ದೊರೆಯು ಇಕ್ಕೇರಿಯಲ್ಲಿ ಕೋಟೆ, ಅರಮನೆ, ಬೊಕ್ಕಸ ಭಂಡಾರ, ಗಜಾಶ್ವ ಶಾಲೆ, ಉಗ್ರಾಣ, ಪಣತ ಮುಂತಾದವುಗಳನ್ನು ಕಟ್ಟಿಸಿದನು. ಆ ಪುರದಲ್ಲಿ ಪೇಟೆ, ತಳವಾರಗಟ್ಟೆ ಮೊದಲಾದವುಗಳನ್ನು ನಿರ್ಮಾಣ ಗೊಳಿಸಿದನು. ಚೌಡಪ್ಪನಾಯಕನಿಗೆ ಇಕ್ಕೇರಿ ಅರಮನೆಯ ಕೊಪ್ಪಲದಲ್ಲಿ ಸಮಾಧಿಯಾಯಿತು.

ಅರನೆಯ ದೊರೆ ಹಿರಿಯ ವೆಂಕಟಪ್ಪನಾಯಕನು ಇಕ್ಕೇರಿ ನಗರವನ್ನು ಅಭಿವೃದ್ಧಿಗೊಳಿಸಿದನು. ಆ ನಗರದಲ್ಲಿ ಬಹು ಕೌಶಲ್ಯ ಯುತ ನಾಟಕಗೃಹವನ್ನು ಕಟ್ಟಿಸಿದನು. ದೊರೆಯ ಉದ್ಯಾನವು ಎಲ್ಲರಿಗೂ ಮುಕ್ತವಿತ್ತು. ಕೆಳದಿ ನಾಣ್ಯಗಳು ಇಕ್ಕೇರಿ ವರಹ ಗಳೆಂದು ಆ ಪಟ್ಟಣದ ಪತನದ ನಂತರವೂ ಕರೆಯಲ್ಪಡುತ್ತಿದ್ದುದು ಇಕ್ಕೇರಿಯ ಪ್ರಸಿದ್ಧಿಗೆ ನಿದರ್ಶನ. ವೀರಭದ್ರನಾಯಕನ ಆಳಿಕೆ ಯಲ್ಲಿ ರಣದುಲ್ಲಾಖಾನನ ದಾಳಿಗೀಡಾಗಿ ಇಕ್ಕೇರಿ ನಾಶವಾಯಿತು (೧೬೩೮). ಕೆಳದಿ ದೊರೆ ೧೬೩೯ ರಲ್ಲಿ ರಾಜಧಾನಿಯನ್ನು ಬಿದನೂರಿಗೆ ಸ್ಥಳಾಂತರಿಸಿದನು.

ಬಿದನೂರು (ಬಿದರೂರು) ಕೆಳದಿ ರಾಜ್ಯದ ಮೂರನೆಯ ರಾಜಧಾನಿಯಾಗಿ ಮೆರೆಯಿತು. ಬಿದನೂರಿಗೆ ವೇಣುಪುರವೆಂತಲೂ ಕರೆಯುತ್ತಿದ್ದರು. ಜನಸಂಮರ್ದವಾದ ಸಿರಿವಂತ ಪಟ್ಟಣವಾಗಿತ್ತು. “ಬಿದನೂರು ಪೌರ್ವಾತ್ಯ ಭಾಗದ ಅತ್ಯಂತ ಶ್ರೀಮಂತ ವಾಣಿಜ್ಯ ನಗರ” ಎಂಬುದಾಗಿ ವಿಲ್ಕ್ಸ್ ಅಭಿಪ್ರಾಯ ಪಟ್ಟಿದ್ದಾನೆ. ಜಾಕೊ

ಬಸ್ ಕ್ಯಾಂಟರ್ ವಿಷರ್ ಎಂಬವನು "ಬಿದನೂರು ರಾಜ್ಯ ಇಡೀ ದಕ್ಷಿಣ ಭಾರತದ ಕಣಜ" ಎಂದು ವರ್ಣಿಸಿದ್ದಾನೆ. ಶಿವಪ್ಪನಾಯಕನು ಈ ಪಟ್ಟಣವನ್ನು ವಾಣಿಜ್ಯ ಕೇಂದ್ರವನ್ನಾಗಿ ಮಾಡಿದನು. ವಿವಿಧ ವೃತ್ತಿಗಳ ಕಸಬುದಾರರು ಅಲ್ಲಿ ನೆಲೆಸುವಂತೆ ಅವರಿಗೆ ಅನುಕೂಲತೆಗಳನ್ನು ಒದಗಿಸಿದ್ದನು.

ಭವ್ಯವಾದ ದೇವಾಲಯು, ಮಠ, ಸುಸಜ್ಜಿತವಾದ ಅರಮನೆ, ಕೋಟೆ, ಸರೋವರ, ಪುಷ್ಪರಂಜಿತ ಉದ್ಯಾನಗಳಿಂದ ಕಂಗೊಳಿಸುತ್ತಿದ್ದ ಬಿದನೂರು ನಗರ ಪ್ರಬಲವಾಗಿದ್ದ ಕೆಳದಿ ರಾಜ್ಯಕ್ಕೆ ತಕ್ಕುದಾದ ರಾಜಧಾನಿಯಾಗಿತ್ತು. ಈ ರಾಜಧಾನಿಯು ಅಪಾರ ಸಂಪತ್ತು, ವೈಭವಗಳು ವಿದೇಶಿಯರನ್ನು ಚಕಿತಗೊಳಿಸಿದುದರಲ್ಲಿ ಆಶ್ಚರ್ಯವೇನಿಲ್ಲ. ೧೭೬೩ ರಲ್ಲಿ ಬಿದನೂರು ಹೈದರ್ ಅಲಿಯ ಕೈವಶವಾದಾಗ ಅಲ್ಲಿ ಅವನಿಗೆ ಅಪಾರ ಸಂಪತ್ತು ಲಭಿಸಿತೆಂದು ಹೈದರನ ದಂಡಿನೊಡನೆ ಬಂದಿದ್ದ ಫ್ರೆಂಚರವನು ಬರೆದಿದ್ದಾನೆ. ಹೈದರನ ಕೈವಶವಾದ ನಂತರ ಬಿದನೂರಿಗೆ 'ಹೈದರ್ ನಗರ್' ಎಂದು ಕರೆಯಲಾಯಿತು. ಈಗ ಅದಕ್ಕೆ 'ನಗರ' ಎಂದು ಕರೆಯುತ್ತಾರೆ.

ಭುವನಗಿರಿದುರ್ಗವು ಕೆಳದಿ ರಾಜ್ಯದ ನಾಲ್ಕನೆಯ ರಾಜಧಾನಿ. ಕೆಳದಿ ಅರಸರ ದುರ್ಗಗಳಲ್ಲಿಯೇ ಇದು ಅತ್ಯಂತ ದುರ್ಗಮ ದುರ್ಗ. ಇದು ಈಗಿನ ತೀರ್ಥಹಳ್ಳಿ ತಾಲೂಕಿನಲ್ಲಿದೆ. ಈ ಕೋಟೆಯ ಸುತ್ತುಮುತ್ತಲೂ ವಿಶಾಲವಾದ ಗುಡ್ಡಗಾಡು, ಅರಣ್ಯಪ್ರದೇಶ ಇವೆ. ಮಹಾಭಾರತ ಕಾಲದಲ್ಲಿ ಈ ಪ್ರದೇಶಕ್ಕೆ ಕಾಮ್ಯಕವನವೆಂದು ಕರೆಯುತ್ತಿದ್ದರು. ಗಂಡಾಂತರ ಪ್ರಸಂಗಗಳಲ್ಲಿ 'ಭುವನಗಿರಿದುರ್ಗ'ವು

ಕೆಳದಿ ಅರಸರಿಗೆ ರಕ್ಷಣೆಯ ಸ್ಥಳವಾಗಿತ್ತು. ಈ ದುರ್ಗದ ಎತ್ತರ ಪ್ರದೇಶದಲ್ಲಿ ಒಂದು ಅರಮನೆಯಿತ್ತು. ಹೈದರ ಅಲಿಯ ವಶ ವಾದ ನಂತರ ಭುವನಗಿರಿದುರ್ಗಕ್ಕೆ 'ಕಾವಲದುರ್ಗ' ಎಂದು ಕರೆಯಲಾಯಿತು.



# ೬. ಕೆಳದಿಯ ಪ್ರಖ್ಯಾತ ನಾಯಕರು

ಕೆಳದಿ ಅರಸುಮನೆತನದ ಹದಿನೆಂಟು ಅರಸರಲ್ಲಿ ೨ ನೆಯ ದೊರೆ ಸದಾಶಿವನಾಯಕ, ೬ ನೆಯ ದೊರೆ ಹಿರಿಯ ವೆಂಕಟಪ್ಪ ನಾಯಕ. ೮ ನೆಯ ದೊರೆ ಶಿವಪ್ಪನಾಯಕ, ೧೩ ನೆಯ ರಾಣಿ ಚೆನ್ನಮ್ಮಾಜಿ, ೧೪ ನೆಯ ದೊರೆ ಹಿರಿಯ ಬಸವಪ್ಪನಾಯಕ ಇವರೆಲ್ಲರೂ ಸುಪ್ರಸಿದ್ಧರು.

## ಸದಾಶಿವನಾಯಕ (ಕ್ರಿ. ಶ. ೧೫೪೦–೧೫೬೫)

ಚೌಡಪ್ಪನ ಕುಮಾರನಾದ ಸದಾಶಿವನಾಯಕನು ತನ್ನ ಅತುಲ ಪರಾಕ್ರಮ, ರಾಜನೀತಿ ನೈಪುಣ್ಯದಿಂದ ತಂದೆ ಕಟ್ಟಿದ ಕೆಳದಿ ಸಂಸ್ಥಾನದ ಬುನಾದಿಯನ್ನು ಭದ್ರಪಡಿಸಿ, ಅದರ ಭವ್ಯ ಭವಿಷ್ಯತ್ತಿಗೆ ಕಾರಣನಾದನು. ಈತನು ತನ್ನ ದೊರೆತನದ ಆರಂಭ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಬಹು ನಿಷ್ಠೆಯಿಂದ ಸೈನಿಕ ಸೇವೆ ಸಲ್ಲಿಸಿದನು. ವಿಜಯನಗರದ ರಾಯನ ಅಪ್ಪಣೆಯ ಮೇರೆಗೆ ಕಲ್ಯಾಣ ಮತ್ತು ಕಲಬುರ್ಗಿ ಕೋಟೆಗಳನ್ನು ಕೈವಶ ಮಾಡಿಕೊಳ್ಳುವದಕ್ಕಾಗಿ ಸಿದ್ಧವಾದಾಗ, ಅಹಮದನಗರದ ನಿಜಾಮು ಶಹ (ಹುಸೇನ ನಿಜಾಮಶಹ) ಕಳುಹಿಸಿದ ಪರಾಕ್ರಮಶಾಲಿಗಳಾದ ವಜೀರರೊಡನೆ, ಸದಾಶಿವನಾಯಕನು ಹೋರಾಡಿದ ವರ್ಣನೆಯು ಕೆಳದಿನೃಪವಿಜಯದಲ್ಲಿ ಬಂದಿದೆ. ಆ ಸುಲ್ತಾನನು ಕಳುಹಿಸಿದ್ದ

ಫಿರೋಜಖಾನ, ತಾಲಿತಖಾನ, ಸಂಜರಖಾನ, ಶಾಲೆಖಾನ, ಮುನಿಲಖಾನ, ದಸ್ತುರಖಾನ, ವಜ್ರಖಾನ, ರಾವುತಖಾನ, ಚೊಕ್ಕ ಸಿಂಗರೆಂಬ ವಜೀರರನ್ನು ಕೆಳದಿನೃಪನು ಯುದ್ಧರಂಗದಲ್ಲಿ ಮಣ್ಣು ಮುಕ್ಕಿಸಿ, ಹಿಂದುಗಳಿಗೆ ವಿಜಯ ತಂದನು. ಚೊಕ್ಕಸಿಂಗನನ್ನು ಕೈಸೆರೆ ಹಿಡಿದು ತಂದು ವಿಜಯನಗರದ ರಾಯನನ್ನು ಬಹು ಸಂತೋಷಪಡಿಸಿದನು.

ಅನಂತರ ಸದಾಶಿವರಾಯನು ರಾಯನಿಗೆ ದುರ್ಲಭವಾಗಿದ್ದ ಕಲ್ಯಾಣ ಮತ್ತು ಕಲಬುರ್ಗಿಯ ಕೋಟೆಗಳನ್ನು ಕೈವಶ ಮಾಡಿ ಕೊಂಡನು. ವಿಜಯನಗರದ ಚಕ್ರವರ್ತಿ ರಾಮರಾಯನು ಸದಾಶಿವ ನಾಯಕನ ಅಮೋಘ ಸೇವೆಗೆ ಮೆಚ್ಚಿ, ಅವನಿಗೆ 'ಕೋಟೆ ಕೋಲಾಹಲ', 'ಇಮ್ಮಡಿ ಸದಾಶಿವೇಂದ್ರ', 'ರಾಯನಾಯಕ' ಎಂಬ ಬಿರುದುಗಳನ್ನು ಮತ್ತು ಗುತ್ತಿ, ಬಾರಕೂರು, ಮಂಗಳೂರು ಪ್ರಾಂತಗಳನ್ನು ಕೊಟ್ಟು ಗೌರವಿಸಿದನು.

ವಿಜಾಪುರದ ಸುಲ್ತಾನ (ಒಂದನೆಯ ಇಬ್ರಾಹಿಮ್ ಆದಿಲಶಹ) ವಿಜಯನಗರ ಸಾಮ್ರಾಜ್ಯದ ಮೇಲೆ ದಾಳಿಯಿಡಲು ಸೈನ್ಯ ಕಳಿಸಿದಾಗ ಸದಾಶಿವನಾಯಕನು ಆ ಶತ್ರು ಸೇನೆಯನ್ನು ಪರಾಭವಗೊಳಿಸಿದನೆಂದು ಕೆಳದಿನೃಪವಿಜಯದಲ್ಲಿ ಹೇಳಲ್ಪಟ್ಟಿದೆ.

ಗರ್ವಿಷ್ಟನಾಗಿದ್ದ ಬೀದರದ ಬರೀದಶಹನ ಭಾರಿ ಸೈನ್ಯವನ್ನು ಸೋಲಿಸಿ, ಅವನ ಗರ್ವಭಂಗ ಮಾಡಿದ ಶ್ರೇಯಸ್ಸು ಕೆಳದಿ ನೃಪಾಲ ಸದಾಶಿವನಾಯಕನದು. ಆ ಮಹಾವಿಜಯದಿಂದ ಸಂಪ್ರೀತನಾದ ರಾಮರಾಯನು ಸದಾಶಿವನಾಯಕನಿಗೆ "ಶತ್ರು ಸಪ್ತಾಂಗಹರಣ" ಎಂಬ ಬಿಂಕದ ಬಿರುದನ್ನು ಕೊಟ್ಟು ಬಹುವಾಗಿ

ಮನ್ನಿಸಿದನು. ರಣರಂಗದಲ್ಲಿ ಅಹಮದನಗರದ ನಿಜಾಮಶಹನ ಮದೋದ್ರೇಕವನ್ನು ಕುಗ್ಗಿಸಿ ರಾಯನಿಂದ 'ಏಕಾಂಗವೀರ' ಎಂಬ ಬಿರುದನ್ನು ಪಡೆದನು. ಮಲೆತಿದ್ದ ತುಳುನಾಡಿನ ಪಾಳೆಗಾರರ ಮದವನ್ನು ಮುರಿಯುವಂತೆ ವಿಜಯನಗರದ ರಾಯನು ಕೆಳದಿ ನಾಯಕನಿಗೆ ಆಜ್ಞಾಪಿಸಲು, ಅವನು ಆ ರಾಜಕಾರ್ಯವನ್ನು ಯಶಸ್ವಿಯಾಗಿ ಪೂರ್ತಿಗೊಳಿಸಿದನು. ವಿರೋಧಿಕಕ್ಷೆಗೆ ಸೇರಿದ ಚಂದ್ರಗುತ್ತಿ, ಬಂಕಾಪೂರದ ನಾಯಕರನ್ನು ಸದಾಶಿವನಾಯಕನು ಜಯಿಸಿದನು. ವಿಜಯನಗರದ ಚಕ್ರವರ್ತಿಗೆ ಆಗಾಗ ಆಟೋಪ ತೋರಿಸುತ್ತಿದ್ದ ಚಿತ್ರದುರ್ಗದ ತಿಮ್ಮಣ್ಣನಾಯಕನನ್ನು ಕೆಳದಿ ದೊರೆ ಸೋಲಿಸಿದನು.

೧೫೬೩ರ ಶಾಸನದಿಂದ ಈ ದೊರೆಯ ರಾಜ್ಯವು ಆರಗ. ಬಾರಕೂರು, ಮಂಗಳೂರುಗಳನ್ನು ಒಳಗೊಂಡಿತ್ತೆಂದು ತಿಳಿದು ಬರುತ್ತದೆ. ಸದಾಶಿವನಾಯಕನು ಕೆಳದಿ, ಇಕ್ಕೇರಿ, ಕವಲೆದುರ್ಗ ಮುಂತಾದ ಕಡೆಗಳಲ್ಲಿ ಕೋಟೆಗಳನ್ನು ಕಟ್ಟಿಸಿ, ಕೆಳದಿ ರಾಜ್ಯದ ಸಂರಕ್ಷಣೆಯ ಭಾರವನ್ನು ಸರಿಯಾಗಿ ನಿರ್ವಹಿಸಿದನು.

ಸದಾಶಿವನಾಯಕನು ಮಹಾಯೋಧನಾಗಿದ್ದನಲ್ಲದೆ ಧಾರ್ಮಿಕ ಸಂಸ್ಥೆಗಳ ಪೋಷಕನೂ ಪ್ರಜಾಹಿತತತ್ಪರನೂ ಆಗಿದ್ದನು. ಶಿವ ಭಕ್ತನಾಗಿದ್ದ ಈ ಅರಸು ಜಂಗಮರಿಗೆ ಅನೇಕ ದಾನಗಳನ್ನು ಕೊಟ್ಟನು. ಕುಶಾವತಿ ನದಿ ತೀರದ ಮೇಲೆ ಸದಾಶಿವಪುರ ಅಗ್ರಹಾರವನ್ನು ಕಟ್ಟಿ, ಶ್ರೋತ್ರಿಯ ಬ್ರಾಹ್ಮಣರಿಗೆ ವೃತ್ತಿಸ್ವಾಸ್ಥ್ಯಗಳನ್ನು ಕೊಟ್ಟನು. ಅಲ್ಲಿ ಸದಾಶಿವೇಶ್ವರ ಎಂಬ ಶಿವಲಿಂಗವನ್ನು

ಪ್ರತಿಷ್ಠೆ ಮಾಡಿ, ನಿತ್ಯ-ನೈಮಿತ್ತಿಕ ಸೇವೆಗೆ ಬೇಕಾದ ಸ್ವಾಸ್ಥ್ಯವನ್ನು ಒದಗಿಸಿದನು.

ಈ ದೊರೆಯು ಇಕ್ಕೇರಿಯಲ್ಲಿ ಈಶ್ವರ ದೇವಾಲಯವನ್ನು ಕಟ್ಟಿಸಿದನು, ಕೆಳದಿಯ ರಾಮೇಶ್ವರ ದೇವಸ್ಥಾನದಲ್ಲಿ ಶಿಲೆಯಲ್ಲಿ ಮನೋಹರವಾದ ನಂದಿಮಂಟಪವನ್ನು ಕಟ್ಟಿಸಿ, ಅಲ್ಲಿ ಪಾರ್ವತಿ ದೇವಿಯ ಪ್ರತಿಮೆಯನ್ನು ಪ್ರತಿಷ್ಠೆ ಮಾಡಿಸಿದನು, ಪೂಜೆ-ಉತ್ಸವಗಳಿಗೆ ಕೆಲವು ಗ್ರಾಮಗಳನ್ನು ಧಾರೆಯೆರೆದು ಕೊಟ್ಟನು. ಕೆಳದಿಯಲ್ಲಿ ಜಂಗಮ ಮಠ ಕಟ್ಟಿಸಿ. ಅದಕ್ಕೆ ದಾನ-ಧರ್ಮಗಳನ್ನು ಮಾಡಿದನು. ಕುಕ್ಕೆಯ ಸುಬ್ರಹ್ಮಣ್ಯ ದೇವಸ್ಥಾನಕ್ಕೆ ಬಲ್ಲ ಎಂಬ ಗ್ರಾಮವನ್ನು ಧಾರೆಯೆರೆದು ಕೊಟ್ಟನು. ಕ್ರಿ. ಶ. ೧೫೫೭ ರ ತಾಮ್ರಶಾಸನದಿಂದ ಈ ನೃಪನು ಧರ್ಮನಾಥನೆಂಬ ೨೫ ನೆಯ ಜಿನತೀರ್ಥಂಕರನಿಗೆ ಭೂ-ಧಾನ ಮಾಡಿದ ಸಂಗತಿ ತಿಳಿದು ಬರುತ್ತದೆ. ಇದು ಈತನ ಔದಾರ್ಯ ಮತ್ತು ಸಮದರ್ಶಿತ್ವಗಳಿಗೆ ಸಾಕ್ಷಿ.

ಒಟ್ಟಿನಲ್ಲಿ, ಸದಾಶಿವನಾಯಕನು ದಕ್ಷಿಣ ಭಾರತದಲ್ಲಿ ಹದಿನಾರನೆಯ ಶತಕದಲ್ಲಿ ಆಗಿಹೋದ ಸಮರ್ಥ ದೊರೆಗಳಲ್ಲಿ ಒಬ್ಬನು. ಈತನು ಕೆಳದಿ ರಾಜ್ಯವನ್ನು ಪ್ರಾಬಲ್ಯಕ್ಕೆ ತಂದನಲ್ಲದೆ, ವಿಜಯನಗರ ಸಾಮ್ರಾಜ್ಯದ ಸಂರಕ್ಷಣೆಯ ಮಹಾಕಾರ್ಯದಲ್ಲಿ ವಿಶೇಷ ಸೇವೆ ಸಲ್ಲಿಸಿದನು. ಸದಾಶಿವನಾಯಕನ ಗುಣಾತಿಶಯಗಳನ್ನು ಲಿಂಗಣ್ಣ ಕವಿ ಈ ರೀತಿ ವರ್ಣಿಸಿದ್ದಾನೆ :

ಭೀಮಂ ಸಂಗರದೊಳ್ಸು
ತ್ರಾಮಂ ಭೋಗದೊಳ್ ಶಾಂತಿಗುಣದೊಳ್ಸೋಮಂ ।
ರಾಮಂ ನನ್ನಿಯೊಳೆಂದೀ
ಭೂಮಿಜನಂ ಪೊಗಳೆ ಬಾಳ್ದನಾಸರನಾಥಂ ॥

ಸದಾಶಿವನಾಯಕನ ತರುವಾಯ ಅವನ ಮಗ ದೊಡ್ಡ ಸಂಕಣ್ಣ ನಾಯಕನು ಕೆಳದಿ ರಾಜ್ಯವನ್ನು ಕ್ರಿ. ಶ. ೧೫೬೬ ರಿಂದ ೧೫೭೦ ರ ವರೆಗೆ ಆಳಿದನು. ಪೋರ್ತುಗೀಜರನ್ನು ಸೋಲಿಸಿ ಅವರ ಗವರ್ನರನನ್ನು ಸೆರೆ ಹಿಡಿದುದ್ದಕ್ಕಾಗಿ ವಿಜಯನಗರದ ಚಕ್ರವರ್ತಿ ದೊಡ್ಡಸಂಕಣ್ಣನಾಯಕನಿಗೆ ಮಹಾದೇವಪುರವನ್ನು ಉಂಬಳಿ ಹಾಕಿಕೊಟ್ಟನು. ರಾಮರಾಜ ನಾಯಕ ಮತ್ತು ವೆಂಕಟಪ್ಪನಾಯಕರೆಂಬ ಪುತ್ರರಿಗೆ ಕನ್ಯಾರತ್ನಗಳನ್ನು ತಂದು ವಿವಾಹ ಮಾಡಿದ ಕೆಲವು ದಿವಸಗಳ ನಂತರ ದೊಡ್ಡ ಸಂಕಣ್ಣ ನಾಯಕನಿಗೆ ವೈರಾಗ್ಯ ಹುಟ್ಟಿತು. ಆಗ ಈತನು ರಾಜ್ಯಭಾರ ವನ್ನು ತಮ್ಮನಾದ ಚಿಕ್ಕ ಸಂಕಣ್ಣನಾಯಕನಿಗೆ ಒಪ್ಪಿಸಿ ಪುಣ್ಯ ಕ್ಷೇತ್ರಗಳ ಯಾತ್ರೆ ಕೈಕೊಂಡನು.* ದಿಲ್ಲಿಯಲ್ಲಿ ಅಂಕುಶಖಾನ ನೆಂಬ ಜಟ್ಟಿಯನ್ನು ದ್ವಂದ್ವಯುದ್ಧದಲ್ಲಿ ಅತ್ಯಂತ ಕೌಶಲ್ಯಪೂರ್ಣ ವಾಗಿ ಸಂಹರಿಸಿ, ದಿಲ್ಲೀಶ್ವರನಿಂದ ಅನೇಕ ಭೂಮಿಗಳನ್ನು ದತ್ತಿ ಪಡೆದನೆಂಬ ವಿಷಯವು ಕೆಳದಿನೃಪವಿಜಯದಲ್ಲಿ ಬಂದಿದೆ. ಈ ದೊರೆಯು ಪೈಶಾಚ ಅಘೋರೇಶ್ವರ ದೇವರ ಆಕೃತಿಯನ್ನು

* ಹೀಗೆ ಕೆಳದಿನೃಪವಿಜಯದಲ್ಲಿ ಬಂದಿದೆ. ಬೇರೆ ಮೂಲ ಗಳಿಂದ ದೊಡ್ಡ ಸಂಕಣ್ಣನಾಯಕನು ಪದಚ್ಯುತಗೊಳಿ ಸಲ್ಪಟ್ಟನೆಂದು ತಿಳಿದು ಬರುತ್ತದೆ.

ಕಾಗದದಮೇಲೆ ಬರೆದುಕೊಂಡನು. ಆ ಪ್ರಕಾರ ಶಿಲೆಯಲ್ಲಿ ಅಘೋರೇಶ್ವರ ಮೂರ್ತಿಯನ್ನು ಕೆತ್ತಿಸಿ ಇಕ್ಕೇರಿಯಲ್ಲಿ ಪ್ರತಿಷ್ಠಾಪನೆ ಮಾಡಿಸಿದನು. ಈ ದೇವರಿಗೆ ಶಿಲಾಮಯವಾದ ಅದ್ಭುತ ದೇವಸ್ಥಾನವನ್ನು ಕಟ್ಟಿಸಿದನು. ಕೆಳದಿಯಲ್ಲಿ ವೀರಭದ್ರದೇವನನ್ನು ಪ್ರತಿಷ್ಠೆ ಮಾಡಿಸಿದನು. ಈತನು ಅನೇಕ ಧರ್ಮ ಕಾರ್ಯಗಳನು ಮಾಡಿದನು.

ದೊಡ್ಡ ಸಂಕಣ್ಣನಾಯಕನ ತರುವಾಯ ಅವನ ತಮ್ಮನಾದ ಚಿಕ್ಕ ಸಂಕಣ್ಣನಾಯಕನು ಕೆಳದಿ ದೊರೆಯಾದನು (೧೫೭೦), ಈತನು ತನ್ನ ರಾಜ್ಯವನ್ನು ಸಮರ್ಥ ರೀತಿಯಿಂದ ಆಳಿದನು. ಭೈರಾದೇವಿಯನಾಡಿನ ಮೇಲೆ ದಾಳಿಯಿಟ್ಟನು; ವಿಜಾಪುರದ ಸಲಾಬತ್‌ಖಾನನನ್ನು ಪರಾಭವಗೊಳಿಸಿದನು; ಸ್ವಾದಿಯ ಅರಸಪ್ಪ ನಾಯಕನ ಸೇನೆಯನ್ನು ಗಾಸಿಗೊಳಿಸಿದನು; ಉಡುಗಣಿಯ ಕೋಟೆಯನ್ನು ಹಿಡಿದುಕೊಂಡನು. ದೊಡ್ಡ ಸಂಕಣ್ಣನಾಯಕನ ಮಗ ರಾಮರಾಜನಾಯಕನು ಚಿಕ್ಕ ಸಂಕಣ್ಣನಾಯಕನನ್ನು ಕೊಂದು ಹಾಕಿ, ತಾನೇ ದೊರೆಯಾದನು. ಇವನು ೧೬ ವರ್ಷಗಳ ಕಾಲ ರಾಜ್ಯಭಾರ ಮಾಡಿದನು.

## ಹಿರಿಯ ವೆಂಕಟಪ್ಪನಾಯಕ (೧೫೮೬–೧೬೨೯)

ರಾಮರಾಜನಾಯಕನ ತರುವಾಯ ಅವನ ತಮ್ಮನಾದ ವೆಂಕಟಪ್ಪನಾಯಕನಿಗೆ ಇಕ್ಕೇರಿಯಲ್ಲಿ ಪಟ್ಟವಾಯಿತು. ಈ ಅರಸನಿಗೆ ಭದ್ರನಾಯಕ, ಹಿರಿಯಮ್ಮ ಎಂಬ ಪುತ್ರ-ಪುತ್ರಿಯರು ಜನಿಸಿದರು. ವೆಂಕಟಪ್ಪನಾಯಕನು ಕೆಳದಿಯ ಅತ್ಯಂತ ಶ್ರೇಷ್ಠ

ಅರಸರಲ್ಲೊಬ್ಬನು. ಇವನ ಆಳಿಕೆಯಲ್ಲಿ ಕೆಳದಿ ರಾಜ್ಯವು ವಿಜಯ ನಗರ ಸಾಮ್ರಾಜ್ಯದ ಹತೋಟಿಯಿಂದ ಸಂಪೂರ್ಣವಾಗಿ ಮುಕ್ತ ವಾಗಿ ಸ್ವತಂತ್ರ ರಾಜ್ಯವೆಂದು ಮೆರೆಯುವ ಭಾಗ್ಯ ಪಡೆಯಿತು.

ಹಿರಿಯ ವೆಂಕಟಪ್ಪನಾಯಕನು ಮಹಾಯೋಧನೂ ವಿಜೇತನೂ ರಾಜನೀತಿವಿಶಾರದನೂ ಆಗಿದ್ದನು. ಅನೇಕ ಯುದ್ಧಗಳಲ್ಲಿ ಕೀರ್ತಿಪ್ರದ ವಿಜಯಗಳನ್ನು ಗಳಿಸಿದನು. ವಿಜಾಪುರದ ದಳಪತಿ ರಣದುಲ್ಲಾಖಾನನನ್ನು ಸಮರಾಂಗಣದಿಂದ ಹೊಡೆದೋಡಿಸಿ ಮುಸಲ್ಮಾನರ ದುರಾಕ್ರಮಣವನ್ನು ತಡೆಗಟ್ಟಿದನು. ಆಗಾಗ ಉಪದ್ರವ ಕೊಡುತ್ತಿದ್ದ ಚಿಕ್ಕಪುಟ್ಟ ನಾಯಕರನ್ನು ಸದೆಬಡಿದು, ಸಾತಳಲು, ಬೆಳವಂದೂರು, ಮಂಡಗದ್ದೆ, ಹೊನ್ನೂರು, ಹಾರನ ಹಳ್ಳಿ ಮೊದಲಾದ ಸ್ಥಳಗಳನ್ನು ಸ್ವಾಧೀನಪಡಿಸಿಕೊಂಡನು. ಬಂಗರ ರಾಜನನ್ನು ಹಿಮ್ಮೆಟ್ಟಿಸಿ ಉಲ್ಲಾಳದ ರಾಣಿಯನ್ನು ರಕ್ಷಿಸಿದ ಶ್ರೇಯಸ್ಸಿಗೆ ಪಾತ್ರನಾದನು. ಗೇರಸೊಪ್ಪೆಯ ರಾಣಿ ಭೈರಾದೇವಿಯನ್ನು ಸೋಲಿಸಿ, ಗೇರಸೊಪ್ಪೆಯನ್ನು ಸಂಪೂರ್ಣವಾಗಿ ಧ್ವಂಸ ಮಾಡಿದನು. ಈ ವಿಜಯದಿಂದಾಗಿ ಹೊನ್ನಾವರ, ಬಾರ್ಕಲೂರು, ಭಟಕಳ ಬಂದರಗಳು ಕೆಳದಿ ಆಧಿಪತ್ಯಕ್ಕೆ ಒಳಗಾದುವು. ಮೆಣಸಿನ ವ್ಯಾಪಾರವೆಲ್ಲ ವೆಂಕಟಪ್ಪನಾಯಕನ ಅಧೀನವಾಯಿತು. ಹೀಗೆ ಪ್ರಬಲನಾದ ಈ ದೊರೆಯ ಕೃಪೆಗೆ ಪಾತ್ರರಾಗಲು ಎಲ್ಲ ಯುರೋಪಿಯನ್ ಕಂಪನಿಗಳು ಹಾತೊರೆದವು.

ಹೊಳೆಹೊನ್ನೂರ ಬಳಿ ಹಿರಿಯ ವೆಂಕಟಪ್ಪನಾಯಕನು ಸಂತೆ ಬೆನ್ನೂರಿನ ಮಾವಳ ಹನುಮನಾಯಕ ಮತ್ತು ಮಂಜರಖಾನರ

ಸಂಯುಕ್ತ ಸೈನ್ಯವನ್ನು ಸಂಪೂರ್ಣ ಸೋಲಿಸಿ, ಆ ವಿಜಯದ ಕುರುಹಿಗಾಗಿ ಹಾನಗಲ್ಲಿನಲ್ಲಿ ಜಯಸ್ತಂಭವನ್ನು ನಿಲ್ಲಿಸಿದನು. ಕೆಳದಿ ರಾಜ್ಯದ ಸಂರಕ್ಷಣೆಯ ದೃಷ್ಟಿಯಿಂದ ಸಾಗರ, ಕೊಂಡೂರು, ಮಂಲಕಾಡ, ಹೊಳೆಬೈಲೂರು, ಬಾರಕೂರು, ಮಲ್ಲಿಕಾರ್ಜುನ, ಪರಿಯಾಳಗಳಲ್ಲಿ ಬಲವಾದ ಕೋಟೆಗಳನ್ನು ಕಟ್ಟಿಸಿದನು.

೧೬೨೩ರಲ್ಲಿ ಗೋವೆಯ ಪೋರ್ತುಗೀಜರು ಹಿರಿಯ ವೆಂಕಟಪ್ಪನಾಯಕನಲ್ಲಿಗೆ ತಮ್ಮ ರಾಯಭಾರಿ ನಿಯೋಗವೊಂದನ್ನು ಕಳಿಸಿ, ಮೆಣಸಿನ ವ್ಯಾಪಾರದಲ್ಲಿ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿ ಕೊಳ್ಳುವ ದೃಷ್ಟಿಯಿಂದ ಅವನೊಡನೆ ಒಂದು ಒಪ್ಪಂದ ಮಾಡಿ ಕೊಂಡರು.

ಈ ಪ್ರಸಿದ್ಧ ದೊರೆ ತನ್ನ ರಾಜ್ಯವನ್ನು ನಾಲ್ಕೂ ದಿಕ್ಕುಗಳಲ್ಲಿ ವಿಸ್ತರಿಸಿದನು. ಪಶ್ಚಿಮದಲ್ಲಿ ಹೊನ್ನಾವರದಿಂದ ಮಲಬಾರದ ವರೆಗಿನ ಕರಾವಳಿ ಪ್ರದೇಶ ಈತನ ಅಧೀನವಾಗಿತ್ತು. ಅಂತೆಯೇ ಲಿಂಗಣ್ಣ ಕವಿ ಹಿರಿಯ ವೆಂಕಟಪ್ಪನಾಯಕನನ್ನು "ಪಡುಗಡ-ಲೊಡೆಯ" ಎಂದು ವರ್ಣಿಸಿದ್ದಾನೆ.

ವೆಂಕಟಪ್ಪನಾಯಕನು ತನ್ನ ಪ್ರಜೆಗಳ ಲೌಕಿಕ ಮತ್ತು ಪಾರಮಾರ್ಥಿಕ ಉನ್ನತಿಗಾಗಿ ಬಹು ಶ್ರಮಿಸಿದನು. ಇವನು ಧರ್ಮ, ವಿದ್ಯೆ, ಕಲೆಗಳ ಪೋಷಕನಾಗಿದ್ದನು. ಲಿಂಗಣ್ಣ ಕವಿ ಹಿರಿಯ ವೆಂಕಟಪ್ಪನಾಯಕನ ಬಹುಮುಖ ಪ್ರತಿಭೆಯನ್ನು ಕುರಿತು ಹೀಗೆ ಹೇಳಿದ್ದಾನೆ:

ಸರಸಸಂಗೀತಲೋಲಂ
ನಿರುಪಮಕೌಶಲ್ಯ ವಿವಿಧಸಾಹಿತ್ಯ ವಿದಂ |
ಸುರುಚಿರಸಕಲಕಲಾಸ
ತ್ಪರಿಣತನೆಂದೆನಿಸಿ ವೆಂಕಟೋರ್ವಿಪನೆಸೆದಂ ||

ಈ ದೊರೆಯು ಅನೇಕ ಮಠ, ದೇವಾಲಯಗಳನ್ನು ಕಟ್ಟಿಸಿದನು. ಭುವನಗಿರಿದುರ್ಗದ ವಿಶ್ವೇಶ್ವರ ದೇವಾಲಯ. ಕೆಳದಿಯ ರಾಮೇಶ್ವರ ದೇವಾಲಯ ಮುಂತಾದ ಅನೇಕ ದೇವಸ್ಥಾನಗಳ ಜೀರ್ಣೋದ್ಧಾರ ಮಾಡಿಸಿದನು. ಕೊಲ್ಲೂರ ಮೂಕಾಂಬಿಕೆಯಮ್ಮ ನವರ ದೇವಸ್ಥಾನವನ್ನು ವಿಸ್ತಾರವಾಗಿ ಶಿಲಾಮಯವನ್ನಾಗಿಸಿ, ವಿಶೇಷ ಭೂ-ಸ್ವಾಸ್ಥಿಯನ್ನು ಕೊಡಿಸಿದನು. ಸದಾಶಿವಸಾಗರ (ಈಗಿನ ಸಾಗರ), ವಿಶ್ವನಾಥಪುರ, ವೀರಂಬಾಪುರ ಮುಂತಾದ ಅಗ್ರಹಾರಗಳನ್ನು ಸ್ಥಾಪಿಸಿದನು. ವೀರಶೈವ ಮಠಗಳಿಗೆ, ಅಗ್ರ ಹಾರಗಳಿಗೆ, ವೈಷ್ಣವ ಮಠಗಳಿಗೆ, ಭುವನಗಿರಿ ದುರ್ಗದಲ್ಲಿಯ ಮುಸಲ್ಮಾನರ ಮಸೀದೆಗೆ ಉದಾರವಾಗಿ ದತ್ತಿಗಳನ್ನು ಕೊಟ್ಟನು. ಶೃಂಗೇರಿ ಜಗದ್ಗುರು ಅಭಿನವ ನರಸಿಂಹಭಾರತಿಗಳ ವಾಸಕ್ಕಾಗಿ ಶೃಂಗೇರಿಯಲ್ಲಿ ಒಂದು ಮಠ ಕಟ್ಟಿಸಿದನು.

ವಿದ್ಯಾಪಕ್ಷಪಾತಿಯಾಗಿದ್ದ ವೆಂಕಟಪ್ಪನಾಯಕನು ಕಾವ್ಯ, ನಾಟಕ, ಧರ್ಮಶಾಸ್ತ್ರ ಮುಂತಾದ ವಿಷಯಗಳನ್ನು ಕುರಿತಾದ ಕೃತಿಗಳಿಗೆ ಪ್ರೋತ್ಸಾಹವಿತ್ತನು. ಈತನು ಸಂಗೀತ, ನಾಟ್ಯಗಳ ಪೋಷಕನಾಗಿದ್ದನು. ಇಕ್ಕೇರಿಯಲ್ಲಿ ಸುಂದರವಾದ ನಾಟ್ಯಗೃಹ ವೊಂದನ್ನು ಕಟ್ಟಿಸಿದನು. ೧೮ ಅಧ್ಯಾಯಗಳುಳ್ಳ ಶಿವಗೀತೆಯನ್ನು ತಿರುಮಲಭಟ್ಟನೆಂಬ ಕವಿಯಿಂದ ಬರೆಯಿಸಿದನು. ಇದೇ ಕವಿಯು

ಈ ದೊರೆಯ ಪ್ರೋತ್ಸಾಹದಿಂದ ಶಿವಾಷ್ಟಪದಿಯನ್ನು ಸಂಸ್ಕೃತದಲ್ಲಿ ರಚಿಸಿದನು. ರಂಗನಾಥ ದೀಕ್ಷಿತನು ತಂತ್ರಸಾರಕ್ಕೆ ಭಾಷ್ಯ ಬರೆದನು. ಅಶ್ವಪಂಡಿತನು 'ಮಾನಪ್ರಿಯ' ಎಂಬ ಅಶ್ವಶಾಸ್ತ್ರವನ್ನು ರಚಿಸಿದನು. ಭಟ್ಟೋಜಿ ದೀಕ್ಷಿತರಿಂದ 'ತತ್ವ ಕೌಸ್ತುಭ' ರಚಿಸಲ್ಪಟ್ಟಿತು.

ಹಿರಿಯ ವೆಂಕಟಪ್ಪನಾಯಕನ ತರುವಾಯ ಅವನ ಮೊಮ್ಮಗನಾದ ವೀರಭದ್ರನಾಯಕನು ಕ್ರಿ. ಶ. ೧೬೨೯ ರಿಂದ ೧೬೪೫ ರ ವರೆಗೆ ಕೆಳದಿ ರಾಜ್ಯಭಾರ ಮಾಡಿದನು. ಇವನು ತನ್ನ ಆಳಿಕೆಯುದ್ದಕ್ಕೂ ಆಂತರಿಕ ಹಾಗೂ ಬಾಹ್ಯ ಶತ್ರುಗಳೊಡನೆ ಹೋರಾಡಬೇಕಾಯಿತು. ವಿಜಾಪುರದ ದಂಡನಾಯಕ ರಣದುಲ್ಲಾ ಖಾನನ ದಾಳಿಯನ್ನು ತಡೆದು ದಕ್ಷಿಣದ ರಾಜ್ಯಗಳನ್ನು ಕಾಪಾಡಿದನು. ಸೋದೆ, ಬೀಳಗಿ ಮತ್ತು ಕಾರ್ಕಳದ ಪಾಳೆಗಾರರನ್ನು ಸೋಲಿಸಿದನು. ಈತನ ಆಳಿಕೆಯಲ್ಲಿ ಚಿಕ್ಕ-ಪುಟ್ಟ ನಾಯಕರು ಕೆಳದಿ ದೊರೆಯ ವಿರುದ್ಧ ದಂಗೆಯೆದ್ದರು. ಕೆಳದಿ ರಾಜ್ಯವಲ್ಲಿ ಯಾದವೀ ಕಲಹಗಳುಂಟಾದವು. ಈ ಎಲ್ಲ ಉಪಟಳಗಳನ್ನು ವೀರಭದ್ರ ನಾಯಕನು ತನ್ನ ಚಿಕ್ಕನಾದ ಶಿವಪ್ಪನಾಯಕನ ಸಹಾಯದಿಂದ ಎದುರಿಸಿ ರಾಜ್ಯದ ಐಕ್ಯತೆಯನ್ನು ಕಾಪಾಡಿದನು. ಕ್ರಿ. ಶ. ೧೬೩೮ ರಲ್ಲಿ ರಣದುಲ್ಲಾಖಾನನು ಇಕ್ಕೇರಿಯ ಮೇಲೆ ದಾಳಿಯಿಟ್ಟು, ಆ ಪಟ್ಟಣವನ್ನು ನಾಶ ಮಾಡಿದನು. ೧೬೩೯ ರಲ್ಲಿ ಈ ದೊರೆಯು ತನ್ನ ರಾಜಧಾನಿಯನ್ನು ಇಕ್ಕೇರಿಯಿಂದ ಬಿದನೂರಿಗೆ ಬದಲಾಯಿಸಿದನು.

ವೀರಭದ್ರನಾಯಕನಿಗೆ ಸಂತಾನವಿರಲಿಲ್ಲ. ಇವನ ತರುವಾಯ ಚಿಕ್ಕ ಸಂಕಣ್ಣನಾಯಕನ ಪ್ರಪೌತ್ರನಾದ ಶಿವಪ್ಪನಾಯಕನಿಗೆ ಬಿದನೂರಿನಲ್ಲಿ ರಾಜಪಟ್ಟಾಭಿಷೇಕವಾಯಿತು.

## ಶಿವಪ್ಪನಾಯಕ (೧೬೪೫–೧೬೬೦)

ವೀರಭದ್ರನಾಯಕನ ತರುವಾಯ ಚಿಕ್ಕ ಸಂಕಣ್ಣನಾಯಕನ ಮೊಮ್ಮಗ, ಸಿದ್ದಪ್ಪನಾಯಕನ ಹಿರಿಯಮಗನಾದ ಶಿವಪ್ಪನಾಯಕನು ಕ್ರಿ. ಶ. ೧೬೪೫ ರಲ್ಲಿ ಕೆಳದಿ ರಾಜ್ಯದ ದೊರೆಯಾದನು. ಆ ಸಂದರ್ಭದಲ್ಲಿ ಸುತ್ತುಮುತ್ತಲಿನ ಪಾಳೆಗಾರರು ಕೆಳದಿ ಪ್ರಭುತ್ವ ಶಿಥಿಲವಾಗುವ ಸಂಧಿಯನ್ನು ಕಾಯುತ್ತಿದ್ದರು. ವಿಜಾಪುರದ ತುರುಷ್ಕರು ನಿಷ್ಕಾರಣವಾಗಿ ಕೆಳದಿ ರಾಜ್ಯಕ್ಕೆ ಉಪದ್ರವ ಕೊಡುತ್ತಿದ್ದರು. ರಾಜಧಾನಿಯಲ್ಲಿ ಕುಮಂತ್ರಿಗಳ ಮತ್ತು ರಾಜಬಂಧು ವರ್ಗದವರ ಪಿತೂರಿಗಳು ನಡೆದಿದ್ದುವು. ಅಂತಹ ಕಠಿಣ ಪರಿಸ್ಥಿತಿಯಲ್ಲಿ ಕೆಳದಿ ರಾಜ್ಯರಥವನ್ನು ನಿರಾತಂಕವಾಗಿ ನಡೆಸಿಕೊಂಡು ಹೋಗಲು ಒಬ್ಬ ಸಮರ್ಥ ಪ್ರಭು ಅಗತ್ಯವಾಗಿದ್ದ. ಕೆಳದಿ ರಾಜ್ಯಲಕ್ಷ್ಮಿಯ ಸುದೈವದಿಂದ ಮಹಾಪ್ರಭು ಶಿವಪ್ಪನಾಯಕ ಅಂತಹ ದುರ್ಭರ ಪ್ರಸಂಗಕ್ಕೆ ಒದಗಿ ಬಂದಿದ್ದ.

ಶಿವಪ್ಪನಾಯಕನು ವೀರಭದ್ರನಾಯಕನ ಆಳಿಕೆಯಲ್ಲಿ ಆತನ ಬಲಗೈಯಂತಿದ್ದನು. ಆ ಸಮಯದಲ್ಲಿ ಈತನು ಅಪಾರ ಆಡಳಿತಾನುಭವ ಪಡೆದಿದ್ದನು. ಕೆಳದಿ ರಾಜ್ಯದ ಅಧಿಪತಿಯಾದ ನಂತರ ಎಲ್ಲ ಸಾಮಂತ ಪಾಳೆಗಾರರನ್ನು ಹತೋಟಿಯಲ್ಲಿಟ್ಟುಕೊಂಡು, ದರ್ಪದಿಂದ ಮತ್ತು ಸದ್ಧರ್ಮದಿಂದ ರಾಜ್ಯಭಾರ ಮಾಡಿದನು.

ಇವನ ಆಳಿಕೆಯಲ್ಲಿ ಕೆಳದಿ ಅರಸುಮನೆತನದ ಪ್ರಭಾವ ಮತ್ತು ವೈಭವಗಳು ಶಿಖರಪ್ರಾಯವಾಗಿದ್ದುವು.

ಈ ದೊರೆಗೆ ಐವರು ಪತ್ನಿಯರಿದ್ದರು. ಭದ್ರಪ್ಪನಾಯಕ, ಸೋಮಶೇಖರನಾಯಕ ಎಂಬ ಇಬ್ಬರು ಪುತ್ರರಿದ್ದರು. ಶಿವಪ್ಪನಾಯಕನು ಬಂಧುವರ್ಗದವರನ್ನೆಲ್ಲ ಪ್ರೀತಿ, ವಿಶ್ವಾಸಗಳಿಂದ ಕಾಣುತ್ತಿದ್ದುದರಿಂದ ಶತ್ರುಗಳಿಗೆ ಅವರನ್ನು ಸೇರಿ ಪಿತೂರಿ ನಡೆಸಲು ಆಸ್ಪದವಿರಲಿಲ್ಲ. ಈ ದೊರೆಯು ವೇಣುಪುರವನ್ನು (ಬಿದನೂರು) ಬಹುವಿಧರಚನೆಗಳಿಂದ ವಿಸ್ತಾರಗೊಳಿಸಿದನು. ಸನಾತನಧರ್ಮಕ್ಕನುಗುಣವಾದ ಸಾಮಾಜಿಕ ವ್ಯವಸ್ಥೆ ನಡೆದುಕೊಂಡು ಬರುವ ಹಾಗೆ ತಾನು ರಾಜಧರ್ಮವನ್ನು ಅನುಸರಿಸಿದನು.

೧೬೪೮ ರಲ್ಲಿ ಶತ್ರುಗಳು ಉಪದ್ರವ ಕೊಡಲಾರಂಭಿಸಿದರು. ಶಿವಪ್ಪನಾಯಕನ ದಂಡು ನುಗ್ಗಿ ಐಗೂರು (ಬಲಂ) ಸಂಸ್ಥಾನದ ಪಾಳೆಗಾರನ ಗರ್ವಭಂಗ ಮಾಡಿತು. ಐಗೂರು ಪಾಳೆಯಪಟ್ಟು ಕೆಳದಿ ಆಧಿಪತ್ಯಕ್ಕೊಳಗಾಯಿತು. ಈ ದೊರೆ ವಸುಧಾರೆ, ಹಾಸನ ಮತ್ತು ಬೇಲೂರು ಕೋಟೆಗಳನ್ನು ಹಿಡಿದುಕೊಂಡನು. ಸಕ್ಕರೆ-ಪಟ್ಟಣವನ್ನು ಜಯಿಸಿದನು.

ವಿಜಯನಗರದ ದೊರೆ ಮುಮ್ಮಡಿ ಶ್ರೀರಂಗರಾಯನು ತನ್ನ ರಾಜ್ಯವನ್ನು ಕಳೆದುಕೊಂಡು ತೀರ ಅಸಹಾಯಕ ಸ್ಥಿತಿಯಲ್ಲಿದ್ದಾಗ ಶಿವಪ್ಪನಾಯಕನು ಆತನಿಗೆ ಸಕ್ಕರೆಪಟ್ಟಣದ ಆಧಿಪತ್ಯವನ್ನು ಕೊಟ್ಟನು. ವಿಜಯನಗರ ಸಾಮ್ರಾಜ್ಯವು ಪುನರುಜ್ಜೀವಿಸಬೇಕೆಂಬ ಉದಾತ್ತ ಹಂಬಲವನ್ನು ಮನದಲ್ಲಿರಿಸಿಕೊಂಡನು. ಸೋದೆ, ಬಿಳಿಗೆ, ತರೀಕೆರೆ. ಹರಪುರ ಮುಂತಾದ ಪಾಳೆಗಾರರ ಸೈನಿಕ

ಸಹಾಯದಿಂದ ಬೇಲೂರನ್ನು ತೆಗೆದುಕೊಂಡು 'ಶ್ರೀರಂಗರಾಯ ಗಿತ್ತು ರಾಯಸಂಸ್ಥಾನಮಂ ನೆಲೆಗೊಳಿಸಿ'ದನೆಂದು ಕೆಳದಿನೃಪ ವಿಜಯದಲ್ಲಿ ಹೇಳಲಾಗಿದೆ.

ಶಿವಪ್ಪನಾಯಕನು ಪಶ್ಚಿಮತೀರ ಪ್ರದೇಶದಲ್ಲಿ ಮಂಗಳೂರು, ವಂಳವೆ, ಕಟ್ಟೆಕೀಳೂರು, ಬೇಕಲು, ಚಿತ್ರಾರಿ, ಚಂದ್ರಗಿರಿ ಮುಂತಾದ ಪಟ್ಟಣಗಳನ್ನು ಗೆದ್ದುಕೊಂಡನು. ಚಂದ್ರಗಿರಿಯಲ್ಲಿ ಒಂದು ಹೊಸ ಕೋಟೆ ಕಟ್ಟಿಸಿದನು. ಅರಬೀ ಸಮುದ್ರದಲ್ಲಿ ಒಂದು ದ್ವೀಪವನ್ನು ಸ್ವಾಧೀನಪಡಿಸಿಕೊಂಡು ಅದಕ್ಕೆ 'ಬಸವ ರಾಜದುರ್ಗ' ಎಂದು ಹೆಸರಿಟ್ಟನು. ಪೋರ್ತುಗೀಜರನ್ನು ಹೊನ್ನಾವರದ ಕೋಟೆಯಿಂದ ಓಡಿಸಿದನು. ಅವರನ್ನು ಘನ ಘೋರವಾದ ಕಾಳಗದಲ್ಲಿ ಸೋಲಿಸಿ ಕಾಂಬೊಲಿಮ್ ಕೋಟೆಯನ್ನು ಸ್ವಾಧೀನಪಡಿಸಿಕೊಂಡನು (೧೬೫೨). ಇದು ಕೆಳದಿ ಇತಿಹಾಸದಲ್ಲಿಯೇ ಮಹತ್ವದ ಸೈನಿಕ ಸಾಧನೆಯು.

ಮಹಾವಿಜೇತನಾದ ಶಿವಪ್ಪನಾಯಕನು ಇಡೀ ತುಳು ನಾಡನ್ನು ಸ್ವಾಧೀನಪಡಿಸಿಕೊಂಡನು. ಕೊಡಗಿನ ಮೇಲೆ ದಾಳಿಯಿಟ್ಟನು. ಮಲೆಯಾಳದಲ್ಲಿ ಸುಗ್ಗಿ ಯಾರಿಗೂ ಬಗ್ಗದ ನಾಯವಾರರನ್ನು ಜಯಿಸಿದನು. ಇದು ಈತನ ಇನ್ನೊಂದು ಗಮನಾರ್ಹವಾದ ಸೈನಿಕ ಸಾಧನೆ. ಇವನು ನೀಲೇಶ್ವರದಲ್ಲಿ ಜಯಸ್ತಂಭವನ್ನು ನಿಲ್ಲಿಸಿದನು.

ವಿಜಾಪುರದ ಮಹಮ್ಮದ ಆದಿಲಶಹನ ಮರಣದ ನಂತರ ಇಕ್ಕೇರಿ, ಸೊರಬ, ಉಡಂಗಣಿ, ಮಹಾದೇವಪುರ ಕೋಟೆಗಳನ್ನು ಹಿಡಿದುಕೊಂಡನು. ಸಿರಸಿ, ಬನವಾಸಿ, ಹೇರೂರು,

ಜೋಳೂರು, ಸೋದೆ ಮುಂತಾದ ಸ್ಥಳಗಳನ್ನು ಗೆದ್ದುಕೊಂಡನು. ಸೋದೆಯ ದೊರೆ ಮಧುಲಿಂಗನಾಯಕನ ಬಿನ್ನಹವನ್ನು ಮನ್ನಿಸಿ ಅವನ ರಾಜ್ಯವನ್ನು ಹಿಂತಿರುಗಿ ಕೊಟ್ಟನು. ತರೀಕೆರೆ, ಸವಣೂರುಗಳನ್ನು ಹಿಡಿದುಕೊಂಡನು. ಬಹು ವ್ಯಾಪಕವಾದ ತನ್ನ ದಂಡಯಾತ್ರೆಗಳಿಂದ ಶಿವಪ್ಪನಾಯಕನು ಕೆಳದಿ ರಾಜ್ಯದ ಮೇರೆಗಳನ್ನು ವಿಸ್ತರಿಸಿದನು. ಅರಗ, ಗುತ್ತಿ, ಬಾರಕೂರು, ಮಂಗಳೂರು, ಪಶ್ಚಿಮ ಕರಾವಳಿ ಪ್ರದೇಶವನ್ನೆಲ್ಲ ಶಿವಪ್ಪನಾಯಕನು ಆಳುತ್ತಿದ್ದನೆಂದು ಒಂದು ಶಾಸನದಿಂದ ವ್ಯಕ್ತವಾಗುತ್ತದೆ.

ಶ್ರೀರಂಗರಾಯನ ಕೈತಪ್ಪಿಹೋಗಿದ್ದ ಶ್ರೀರಂಗಪಟ್ಟಣವನ್ನು ಮರಳಿ ದೊರಕಿಸಿಕೊಡುವ ಮಹಾಉದ್ದೇಶದಿಂದ ಈ ದೊರೆ ತನ್ನ ಅಧೀನರಾದ ಪಾಳೆಗಾರರ ಸೈನಿಕ ನೆರವನ್ನು ಪಡೆದು, ದೊಡ್ಡ ಸೈನ್ಯದೊಂದಿಗೆ ಶ್ರೀರಂಗಪಟ್ಟಣದ ಮೇಲೆ ಏರಿ ಹೋದನು (೧೬೫೯). ಗ್ರಾಮವೆಂಬಲ್ಲಿ ಬೀಡುಬಿಟ್ಟಾಗ ಮೈಸೂರಿನ ದೊರೆ ದೇವರಾಜ ಒಡೆಯರು ದಳವಾಯಿ ಹಂಪರಾಜಯ್ಯನ ಮುಂದಾಳ್ತನದಲ್ಲಿ ಭಾರಿ ಸೈನ್ಯ ಕಳಿಸಿದರು. ಆಗ ಜರುಗಿದ ಯುದ್ಧದಲ್ಲಿ ಶಿವಪ್ಪನಾಯಕನಿಗೆ ಸಂಪೂರ್ಣ ಜಯವಾಯಿತು. ಅನಂತರ ಕೆಳದಿ ದೊರೆ ಶ್ರೀರಂಗಪಟ್ಟಣದ ಕೋಟೆಗೆ ಮುತ್ತಿಗೆ ಹಾಕಿದನು. ಆ ಕೋಟೆಯ ಅಧಿಕಾರಿಗಳು ಕೆಳದಿಯವರ ಮುತ್ತಿಗೆಯನ್ನು ಎದುರಿಸಲಾಗದೆ, ವಿಜಾಪುರದ ಸೈನ್ಯದ ನೆರವು ಪಡೆಯಲು ಹವಣಿಸಿದರು. ಬಹಲೂಲಖಾನನ ನೇತೃತ್ವದಲ್ಲಿ ಬಂದಿದ್ದ ವಿಜಾಪುರದ ಸೈನ್ಯವು ಹಿಂತಿರುಗಿ

ಹೋಗಲು ಶಿವಪ್ಪನಾಯಕನ ರಾಜತಂತ್ರವೇ ಕಾರಣ. ಶ್ರೀರಂಗ ಪಟ್ಟಣದ ಕೋಟೆ ಕೈವಶವಾಗುವ ಸುಸಂಧಿ ಒದಗಿದ್ದರೂ ಮೈಸೂರಿನವರ (ಮಾಯಾವಿಗಳ) ಕುತಂತ್ರದಿಂದ ಅದು ಸಾಧಿಸ ಲಿಲ್ಲ. ಶತ್ರುಗಳೆಸಗಿದ ದುಷ್ಕೃತ್ಯದ ಫಲವಾಗಿ ಶಿವಪ್ಪನಾಯಕನ ದೇಹದಲ್ಲಿ ಅನಾರೋಗ್ಯವುಂಟಾಯಿತು; ಆದ್ದರಿಂದ ಅವನು ಮುತ್ತಿಗೆ ತೆಗೆಸಿ ಕೂಡಲೆ ಬಿದನೂರಿಗೆ ಮರಳಿದನೆಂದು ಕೆಳದಿ ನೃಪವಿಜಯದಲ್ಲಿ ಬಂದಿದೆ.

ಶಿವಪ್ಪನಾಯಕನ ಶಿಸ್ತು :

ಶಿವಪ್ಪನಾಯಕನು ಏರ್ಪಡಿಸಿದ ಕಂದಾಯದ ಶಿಸ್ತು ಆತನ ಕೀರ್ತಿಯನ್ನು ಚಿರಸ್ಥಾಯಿಗೊಳಿಸಿದೆ. ಆ ಕಾಲದಲ್ಲಿ ಸರಕಾರದ ಆದಾಯದ ಬಾಬುಗಳಲ್ಲಿ ಕಂದಾಯವೇ ಬಹು ಮುಖ್ಯವಾಗಿತ್ತು. ಆದ್ದರಿಂದ ಪ್ರಜೆ ಮತ್ತು ಸರಕಾರದ ಹಿತಾಸಕ್ತಿಗಳನ್ನು ಕಾಪಾಡು ವಂತಹ ಸಮಂಜಸವಾದ ಕಂದಾಯ ನೀತಿ ಅವಶ್ಯವಾಗಿತ್ತು. ಶಿವಪ್ಪನಾಯಕನು ಸರಕಾರಕ್ಕೂ ಪ್ರಜೆಗಳಿಗೂ ಅನುಕೂಲವಾಗು ವಂತಹ ಕಂದಾಯದ ಶಿಸ್ತನ್ನು ರೂಪಿಸಿ, ಅದನ್ನು ಕಟ್ಟು ನಿಟ್ಟಾಗಿ ಜಾರಿಗೆ ತಂದನು. ಈ ವಿಷಯದಲ್ಲಿ ಇವನನ್ನು ಮೀರಿಸಿದ ಉದಾಹರಣೆಗಳು ತೀರ ವಿರಳ.

ಶಿವಪ್ಪನಾಯಕನು ಮುಂದೆ ಕಾಣಿಸಿದಂತೆ ಭೂ-ಗುಣ ಮಟ್ಟದ ಆಧಾರದ ಮೇಲೆ ಜಮೀನುಗಳನ್ನು ಐದು ತರಗತಿ ಗಳಾಗಿ ವಿಂಗಡಿಸಿದನು :

೧ ನೆಯ ತರಗತಿ, ಉತ್ತಮ ಭೂಮಿ—ಮರಳು ಮಿಶ್ರವಾದ ಎರೆಮಣ್ಣು
೨ ,, ,, ಮಧ್ಯಮ ಭೂಮಿ--ಬೆಟ್ಟಬೀಸು, ಬಯಲಾಗಿರುವ ಕೆಮ್ಮಣ್ಣು
೩ ,, ,, ಕನಿಷ್ಠ ಭೂಮಿ — ನೀರಿನ ಸೌಕರ್ಯವುಳ್ಳ ಕರಿಮಣ್ಣು.
೪ ,, ,, ಅಧಮ ಭೂಮಿ--ತೇವವಿಲ್ಲದ ಗಟ್ಟಿಯಾದ ಭೂಮಿ.
೫ ,, ,, ಅಧಮಾಧಮ ಭೂಮಿ--ನೀರಿನ ಮಟ್ಟದ ಮೇಲಿರುವ ಬಿಸಿಮರಳು.

ಪ್ರತಿಯೊಂದು ಹಳ್ಳಿಯಲ್ಲಿಯೂ ಮೇಲೆ ವಿವರಿಸಿದ ಪ್ರತಿಯೊಂದು ತರಗತಿಯ ಭೂಮಿಯನ್ನು ಆಯ್ಕೆಮಾಡಿ, ಸರಕಾರದ ವತಿಯಿಂದ ಅದನ್ನು ಸಾಗುವಳಿ ಮಾಡಿಸಿ, ಐದು ವರ್ಷಗಳ ಸರಾಸರಿ ಬೆಳೆಯ ಉತ್ಪನ್ನವನ್ನು ನಿರ್ಧರಿಸಿ: ಆ ಉತ್ಪನ್ನದ ಮೂರನೆಯ ಒಂದುಭಾಗ ಸರಕಾರಕ್ಕೆ ಸಲ್ಲತಕ್ಕದ್ದೆಂದು ಶಿವಪ್ಪನಾಯಕನು ಗೊತ್ತುಪಡಿಸಿದ್ದನು. ಐದೂ ತರಗತಿಯ ಭೂಮಿಗಳಿಗೆ ಹೆಚ್ಚಿನ (ಕಂದಾಯದ) ಕಡಿಮೆ (ಕಂದಾಯದ) ದರಗಳನ್ನು ನಿರ್ಧರಿಸುವ ಪದ್ಧತಿಯಿತ್ತು.

ಶಿವಪ್ಪನಾಯಕನು ತೋಟದ (ಬಾಗಾಯಿತು) ಸಾಗುವಳಿ ವಿಷಯದಲ್ಲಿ ಬೇರೆ ಕಂದಾಯ ಕ್ರಮವನ್ನು ಜಾರಿಗೆ ತಂದನು. ಕೆಳದಿ ರಾಜ್ಯದ ಮಲೆನಾಡ ಸೀಮೆಯಲ್ಲಿ ಅಡಿಕೆ ಸಾಗುವಳಿಯೇ ಬಹು ಮುಖ್ಯವಾಗಿತ್ತು. ಭೋಗವಸ್ತುಗಳಲ್ಲಿ ಒಂದಾದ ಅಡಿಕೆಯ ಮೇಲೆ ನ್ಯಾಯವಾಗಿಯೇ ಹೆಚ್ಚಿನ ದರದ ಕಂದಾಯ

ವಿಧಿಸಲಾಗಿತ್ತು. ಶಿವಪ್ಪನಾಯಕನು ಉಂದಾಯದ ಲೆಕ್ಕಾಚಾರಕ್ಕಾಗಿ ಒಂದು ಸಾವಿರ ಅಡಕೆ ಮರಗಳ ಏಕಮಾನವನ್ನಿಟ್ಟುಕೊಂಡು, ಮರದಿಂದ ಮರಕ್ಕೆ ೧೮॥ ಅಡಿ ಅಂತರಕ್ಕೆಂದು ಗೊತ್ತುಪಡಿಸಿದ್ದನು.

ಈ ದೊರೆಯು ತನ್ನ ಉದ್ಯಾನಗಳಲ್ಲಿ ಗಿಡ. ಪೈರುಗಳನ್ನು ಬೆಳೆಯಿಸಿ, ತಾನೇ ಅವುಗಳನ್ನು ನೋಡಿಕೊಂಡು, ಉಂದಾಯದ ಶಿಸ್ತನ್ನು ನಿಗದಿಪಡಿಸುತ್ತಿದ್ದನು. 'ಶಿವಪ್ಪನಾಯಕನ ಶಿಸ್ತು' ಎಂಬುದು ಮಲೆನಾಡಿನಲ್ಲಿ ಅಚ್ಚುಕಟ್ಟಾದ ಆಚರಣೆಗೆಲ್ಲ ಪ್ರತಿನಾಮವಾಗಿ ನಿಂತಿದೆ.

ಶಿವಪ್ಪನಾಯಕನ ಶಿಸ್ತಿನಿಂದ ಸರಕಾರದ ಉತ್ಪನ್ನ ಹೆಚ್ಚಿತಲ್ಲದೆ. ರೈತರಿಗೂ ಕ್ಷೇಮಕರವಾಯಿತು. ಈ ದೊರೆ ಅನ್ಯಾಯವಾದ ದಂಡ ಮತ್ತು ತೆರಿಗೆಗಳನ್ನು ರದ್ದುಪಡಿಸಿದನು. ಒಂದು ಗೋಪಾದದಷ್ಟು ಭೂಮಿ ಸಹ ಪಡ ಬೀಳಲು ಅವಕಾಶ ಕೊಡದೆ ಕೃಷಿ ಅಭಿವೃದ್ಧಿ ಸಾಧಿಸಿದನು. ರೈತರಿಗೆ ಬೇಕಾದಷ್ಟು ಸಹಾಯ ಮಾಡಿದನೆಂಬುದು ಕೆಳದಿನೃಪವಿಜಯದಲ್ಲಿ ಬರುವ ಉಲ್ಲೇಖದಿಂದ ವಿದಿತವಾಗುತ್ತದೆ :

ಪ್ರಜೆಗಳುಸಿರ್ವ ಬಿನ್ನಪವನಾಲಿಸಿಯೊಳ್ಗಿರೆಕಾಳ್ಪುರಂಗಳಂ
ಸೃಜಿಯಿಸಿ ಮೇಣವರ್ಗೆ ಕರಮೂಲಧನಂಗಳನಿತ್ತು ಬಿತ್ತುಮಂ।
ನಿಜಮೆನಿಸಿತ್ತು ಗೋಷ್ಪದದನಿತ್ತಿಳೆಯಂ ಮಿಗೆ ಬೀಳಲೀಯದಾ
ದ್ವಿಜಸುರಪಾದಪಂ ಶಿವನೃಪಂ ಮಿಗೆ ಗೈವೆಗೆ ತಂದನಳ್ತಿಯಿಂ॥

ಶಿವಪ್ಪನಾಯಕನ ಶಿಸ್ತು ಅವನ ತರುವಾಯ ಯಾವ ಬದಲಾವಣೆಗಳಿಲ್ಲದೆ ಕ್ರಿ. ಶ. ೧೭೦೦ ರ ವರೆಗೆ ಜಾರಿಯಲ್ಲಿತ್ತು.

ಮುಂದೆ ಬಂದ ದೊರೆಗಳು ತಮ್ಮ ಉತ್ಪನ್ನ ಹೆಚ್ಚಿಸಿಕೊಳ್ಳಲು ಶಿವಪ್ಪನಾಯಕನ ಶಿಸ್ತಿನಮೇಲೆ ತುಸು ಹೆಚ್ಚು ತೆರಿಗೆ ಹಾಕಿದರಷ್ಟೆ. ನ್ಯಾಯಬದ್ಧವಾದ ಮತ್ತು ಖಂಡಿತವಾದ ಕಂದಾಯದ ಶಿಸ್ತನ್ನು ರೂಪಿಸಿದ ಶಿವಪ್ಪನಾಯಕನ ನ್ಯಾಯದೃಷ್ಟಿ ಮತ್ತು ಆಡಳಿತ ಸಾಮರ್ಥ್ಯಗಳನ್ನು ಆಂಗ್ಲ ಅಧಿಕಾರಗಳು ಸಹ ಕೊಂಡಾಡಿದ್ದಾರೆ.

ಶಿವಪ್ಪನಾಯಕನು ತುಂಗಭದ್ರಾ ನದಿ ತೀರದ ಮೇಲೆ 'ಶಿವರಾಜಪುರ' ಎಂಬ ಅಗ್ರಹಾರ ಸ್ಥಾಪಿಸಿ, ಶ್ರೋತ್ರಿಯ ಬ್ರಾಹ್ಮಣರಿಗೆ ವೃತ್ತಿಗಳನ್ನು ದಯಪಾಲಿಸಿದನು. ರಾಮೇಶ್ವರ ದಿಂದ ಕಾಶಿಯ ವರೆಗಿನ ಪ್ರದೇಶದಲ್ಲಿದ್ದ ಶಿವಾಲಯ ಮತ್ತು ವಿಷ್ಣು ದೇವಸ್ಥಾನಗಳಲ್ಲಿ ದಾನ-ಧರ್ಮ, ಪೂಜಾದಿ ಕಾರ್ಯಗಳು ಸರಿಯಾಗಿ ನಡೆಯುವಂತೆ ವ್ಯವಸ್ಥೆ ಮಾಡಿದನು. ಅನೇಕ ಯಜ್ಞ ಗಳನ್ನು ನೆರವೇರಿಸಿದನು. ಶೃಂಗೇರಿ ಮತ್ತು ಇತರ ಮಠಗಳಿಗೆ ಪರಂಪರಾಗತ ರಾಜಾಶ್ರಯವನ್ನು ಮುಂದುವರಿಸಿದನು.

ಶಿವಪ್ಪನಾಯಕನು ಕ್ರೈಸ್ತರಿಗೆ ಉಪದೇಶ ನೀಡುವ ಮತ್ತು ಮತಾಂತರಗೊಳಿಸುವ ಅವಕಾಶ ನೀಡಿದ್ದನು. ಆದರೆ, ಚರ್ಚಿನ ಅಧಿಕಾರಿಗಳು ಮಾತ್ರ ಭಾರತೀಯರೇ ಆಗಿರಬೇಕೆಂಬ ಕಟ್ಟಳೆ ಮಾಡಿದ್ದನು.

ಒಟ್ಟಿನಲ್ಲಿ, ಶಿವಪ್ಪನಾಯಕನು ಕೆಳದಿ ಅರಸರಲ್ಲಿಯೇ ಶ್ರೇಷ್ಠ ವ್ಯಕ್ತಿ. ಈತನ ಪರಾಕ್ರಮ, ಸ್ವಾಮಿನಿಷ್ಠೆ, ಮುತ್ಸದ್ದಿತನ, ಆಡಳಿತ ಕೌಶಲ್ಯ, ನ್ಯಾಯದೃಷ್ಟಿ, ಪರಧರ್ಮಸಹಿಷ್ಣುತೆಗಳು ನಿಜ ವಾಗಿಯೂ ಪ್ರಶಂಸಾರ್ಹವಾಗಿವೆ. ಶಿವಪ್ಪನಾಯಕನು ರಾಜ್ಯ

ವಾಳಿದ ಬಗೆಯನ್ನು ಲಿಂಗಣ್ಣ ಕವಿ ಬಹು ಸುಂದರವಾಗಿ ನಿರೂಪಿಸಿದ್ದಾನೆ :

ದುಷ್ಟಜನರ್ಕಳ ಶಿಕ್ಷಿಸಿ
ಶಿಷ್ಟರನುರೆ ಪೊರೆದು ಸಂತತಂ ಶಿವಪೂಜಾ |
ನಿಷ್ಠನೆಂದೆನಿಸಿ ಲೋಗರ
ರಿಷ್ಟಗಳಂ ತವಿಸಿ ಪೊಡವಿಯಂ ಪಾಲಿಸಿದಂ ||

ಶಿವಪ್ಪನಾಯಕನ ತರುವಾಯ ಅವನ ತಮ್ಮನಾದ ಚಿಕ್ಕ ವೆಂಕಟಪ್ಪನಾಯಕ ಕೆಳದಿ ರಾಜ್ಯದ ಅರಸನಾದನು (೧೬೬೦). ಇವನು ಕೇವಲ ಒಂದು ವರ್ಷ ರಾಜ್ಯಭಾರ ಮಾಡಿದನು.

ಚಿಕ್ಕ ವೆಂಕಟಪ್ಪನ ನಂತರ ಶಿವಪ್ಪನಾಯಕನ ಮಗ ಭದ್ರಪ್ಪನಾಯಕನು ೧೬೬೨ರಿಂದ ೧೬೬೪ರ ವರೆಗೆ ಕೆಳದಿ ರಾಜ್ಯವನ್ನು ಆಳಿದನು. ಈತನು ಪುಣ್ಯಕಾರ್ಯ, ದೈವಭಕ್ತಿಗಳಿಗೆ ಹೆಸರಾಗಿದ್ದನು.

ಕ್ರಿ. ಶ. ೧೬೬೪ ರಿಂದ ೧೬೭೧ ರ ವರೆಗೆ ಭದ್ರಪ್ಪನಾಯಕನ ತಮ್ಮನಾದ ಹಿರಿಯ ಸೋಮಶೇಖರನಾಯಕನು ರಾಜ್ಯಭಾರ ಮಾಡಿದನು. ಈತನು ಅನೇಕ ಮಠಗಳಿಗೆ, ಧಾರ್ಮಿಕ ಸಂಸ್ಥೆಗಳಿಗೆ ಉದಾರವಾಗಿ ಸಹಾಯ ಸಲ್ಲಿಸಿದನು. ಸೋಮಶೇಖರನಾಯಕನ ಕೊನೆಯ ದಿನಗಳು ಕಷ್ಟಕರವಾಗಿದ್ದುವು. ಕೆಲವು ದ್ವೇಷಿಗಳು ಸಂಚು ಹೂಡಿ ಸೋಮಶೇಖರನಾಯಕನನ್ನು ಇರಿದು ಕೊಂದರು. ಅನಂತರ ಕೆಳದಿ ರಾಜಪಟ್ಟಕ್ಕಾಗಿ ಒಳಸಂಚುಗಳು, ಅಂತಃಕಲಹಗಳು ನಡೆದುವು.

## ರಾಣಿ ಚೆನ್ನಮ್ಮಾಜಿ (೧೬೭೧-೧೬೯೬)

ಕೆಳದಿಯ ಕೀರ್ತಿದೆಯ ರಾಣಿ ಚೆನ್ನಮ್ಮಾಜಿ ಕೋಟಿಪುರದ ಸಿದ್ದಪ್ಪ ಶೆಟ್ಟಿಯ ಮಗಳು; ದೊರೆ ಹಿರಿಯ ಸೋಮಶೇಖರನ ಧರ್ಮಪತ್ನಿ. ಪತಿಯ ಜೊತೆಗೆ ಅನೇಕ ವರ್ಷಗಳ ವರೆಗೆ ರಾಜ್ಯಭಾರ ಮಾಡಿ ಆಡಳಿತದ ಅನುಭವ ಪಡೆದಿದ್ದಳು. ತನ್ನ ಪತಿಯ ಕಗ್ಗೊಲೆಯ ನಂತರದ ಪ್ರಕ್ಷುಬ್ಧ ಪರಿಸ್ಥಿತಿಯನ್ನು ಧೈರ್ಯವಾಗಿ ಎದುರಿಸಿದಳು. ಕೊಲೆಗಡುಕರಲ್ಲಿ ಕೆಲವರನ್ನು ಉಪಾಯದಿಂದ ಹಿಡಿಸಿ ಕೊಲ್ಲಿಸಿದಳು; ಮತ್ತೆ ಕೆಲವರನ್ನು ದೇಶಭ್ರಷ್ಟರನ್ನಾಗಿ ಮಾಡಿದಳು.

ಈ ರಾಣಿಯು ದುಷ್ಟ ಮಂತ್ರಿಗಳ ಪಿತೂರಿಯನ್ನು ಎದುರಿಸ ಬೇಕಾಯಿತು. ಕಂದಾಚಾರದ ಲಕ್ಷ್ಮಯ್ಯ, ವೀರಭದ್ರಯ್ಯ ಎಂಬ ವರು ಕೆಲವು ದುಷ್ಟರನ್ನು ಸೇರಿಸಿಕೊಂಡು ಚೆನ್ನಮ್ಮಾಜಿಯನ್ನು ಪದಚ್ಯುತಗೊಳಿಸುವ ಪಿತೂರಿ ನಡೆಸಿದರು. ಅಂಧಕ ವೆಂಕ ಟಯ್ಯನ ಮಗನಿಗೆ ಶಿವಪ್ಪನಾಯಕನೆಂದು ಹೆಸರಿಟ್ಟು, ಆ ದುಷ್ಟರು ಆ ಹುಡುಗನಿಗೆ ಪಟ್ಟಗಟ್ಟಿದರು. ಇವನೇ ಕೃತ್ರಿಮ ಶಿವಪ್ಪ ನಾಯಕ. ಇವನು ಕೇವಲ ಮೂರು ತಿಂಗಳು ದೊರೆಯೆನಿಸಿ ದ್ದನು.

ಕೆಳದಿ ರಾಜ್ಯದ ಮುಖಂಡರಾಗಿದ್ದ ಜನರಲ್ಲಿ ಎರಡು ಪಂಗಡ ಗಳಿದ್ದುವು. ಅವುಗಳಲ್ಲಿಯ ದ್ವೇಷ, ಕಾದಾಟಗಳಿಂದ ಕೆಳದಿ ರಾಜ್ಯದಲ್ಲಿ ಅನಾಯಕತ್ವ, ಅರಾಜಕತೆ ತಲೆದೋರಿದವು. ಚೆನ್ನ ಮ್ಮಾಜಿಯು ತನ್ನ ಪ್ರಾಣಕ್ಕೆ ಅಪಾಯವುಂಟಾಗಬಹುದೆಂದ

ಭಾವಿಸಿ, ವೇಣುಪುರವನ್ನು (ಬಿದನೂರು) ಬಿಟ್ಟು ಭುವನಗಿರಿ ದುರ್ಗಕ್ಕೆ ಹೋದಳು. ಅಲ್ಲಿ ಚೆನ್ನಮ್ಮಾಜಿಯು ಕಾಸರಗೋಡು ತಿಮ್ಮಣ್ಣನಾಯಕ, ಸಬ್ಬನೀಸ ಕೃಷ್ಣಪ್ಪಯ್ಯರೊಡನೆ ಸಮಾಲೋಚನೆ ನಡೆಸಿ, ಬಿಕ್ಕಟ್ಟನ್ನು ಪರಿಹರಿಸಿದಳು. ಎಲ್ಲರೂ ರಾಜಿಯಾದರು. ಕುತ್ಸಿತ ಶಿವಪ್ಪ ನಾಯಕನಿಗೆ ಕೆಳದಿ ರಾಜಪಟ್ಟದ ಅಧಿಕಾರವಿಲ್ಲೆಂದು ತೀರ್ಮಾನಿಸಿದರು.

ಭುವನಗಿರಿದುರ್ಗದ ಅರಮನೆಯಲ್ಲಿ ಚೆನ್ನಮ್ಮಾಜಿಗೆ ಪಟ್ಟಾಭಿಷೇಕವಾಯಿತು. ಅನಂತರ ಆಕೆಯು ತನ್ನ ಸೇನೆ, ಪರಿವಾರದೊಂದಿಗೆ ಬಿದನೂರಿಗೆ ಹಿಂತಿರುಗಿದಳು.

ಹಿಂದಿನ ಕೆಳದಿ ಅರಸರಂತೆ ಈ ರಾಣಿಯೂ, ನೆರೆಹೊರೆಯ ದೊರೆಗಳ ದಾಳಿಗಳನ್ನು ಎದುರಿಸಬೇಕಾಯಿತು. ಚೆನ್ನಮ್ಮಾಜಿಯು ತವನಿಧಿ, ಹೊನ್ನಾಳಿ ಮತ್ತು ಜಡೆ ಕೋಟೆಗಳನ್ನು ಗೆದ್ದಳು. ಹಾವಳಿಯೆಬ್ಬಿಸಿದ ಸೋದೆ (ಸ್ವಾದಿ), ಬನವಾಸಿ, ಸಿರಸಿಗಳ ಸಂಸ್ಥಾನಿಕರನ್ನು ಸಬ್ಬನೀಸ ಕೃಷ್ಣಪ್ಪಯ್ಯನು ಸೋಲಿಸಿದನು. ಆ ದೊರೆಗಳು ವಿಧೇಯರಾಗಿರುವುದಾಗಿ ಒಪ್ಪಿಕೊಂಡ ನಂತರ ಅವರವರ ರಾಜ್ಯಗಳನ್ನು ಹಿಂತಿರುಗಿ ಕೊಡಲಾಯಿತು.

ಕ್ರಿ.ಶ. ೧೬೭೪ ರಲ್ಲಿ ಕೆಳದಿ ಮತ್ತು ಮೈಸೂರುಗಳ ನಡುವೆ ಯುದ್ಧ ಜರುಗಿತು. ಮೈಸೂರಿನ ದಳವಾಯಿ ಕುಮಾರಯ್ಯ ಅರಕಲಗೂಡು ಮುಂತಾದ ಸ್ಥಳಗಳನ್ನು ಹಿಡಿದುಕೊಂಡನು. ಆದರೆ ಚೆನ್ನಮ್ಮಾಜಿಯ ಸೈನ್ಯವು ಕುಮಾರಯ್ಯನನ್ನು ಹಾಸನದ ಬಳಿ ಸೋಲಿಸಿ, ವಸುಧಾರೆ ಮುಂತಾದ ಸ್ಥಳಗಳನ್ನು ಹಿಡಿದುಕೊಂಡಿತು.

ಚೆನ್ನಮ್ಮಾಜಿಯು ಮೈಸೂರು ರಾಜ್ಯಕ್ಕೆ ಸೇರಿದ್ದ ಕಡೂರು, ಬಾಣಾವರ, ಹಾಸನ ಮತ್ತು ಬೇಲೂರುಗಳನ್ನು ಹಿಡಿದುಕೊಂಡು ತನ್ನ ರಾಜ್ಯದ ದಕ್ಷಿಣ ಗಡಿಯನ್ನು ಭದ್ರಪಡಿಸಿದಳು.

ಚೆನ್ನಮ್ಮಾಜಿಯು ಬಲಾಢ್ಯನಾದ ಮೊಗಲ್ ಚಕ್ರವರ್ತಿ ಔರಂಗಜೇಬನ ಭಾರಿ ಸೈನ್ಯವನ್ನು ಸೋಲಿಸಿದುದು ಈ ರಾಣಿಯ ಆಳಿಕೆಯಲ್ಲಿ ಜರುಗಿದ ಚಿರಸ್ಮರಣೀಯ ಘಟನೆ. ಶಿವಾಜಿಯ ಮಗನಾದ ರಾಜಾರಾಮನು ಮೊಗಲರನ್ನು ಎದುರಿಸಲು ಯತ್ನಿಸಿದಾಗ ಔರಂಗಜೇಬನು ಅವನನ್ನು ದಂಡಿಸಲು ಭಾರಿ ಸೇನೆಯನ್ನು ಕಳುಹಿಸಿದನು. ಆಗ ರಾಜಾರಾಮನು ಪನ್ನಾಳಿಯಿಂದ* ಪಲಾಯನ ಮಾಡಿ ಕೆಳದಿ ರಾಜ್ಯವನ್ನು ಹೊಕ್ಕನು. ತನ್ನನ್ನು ಮೊಗಲ ದಂಡಿನವರು ಕಾಣದಂತೆ ಕೆಳದಿ ರಾಜ್ಯದಿಂದ ಪಾರುಗಾಣಿಸ ಬೇಕೆಂದು ರಾಣಿ ಚೆನ್ನಮ್ಮಾಜಿಗೆ ಮೊರೆಹೊಕ್ಕನು. ಕರುಣಾನಿಧಿಯೂ ಧೀರಳೂ ಆದ ಆ ರಾಣಿ 'ಮೊರೆಹೊಕ್ಕವನನ್ನು ಬಿಟ್ಟು ಕೊಡುವುದು ರಾಜಧರ್ಮವಲ್ಲ' ವೆಂದು ನಿಶ್ಚಯಿಸಿ, ರಾಜಾರಾಮನಿಗೆ ರಕ್ಷಣೆಯ ಭರವಸೆಯನ್ನಿತ್ತಳು. ಅವನನ್ನು ವೇಷಾಂತರದಲ್ಲಿ ಕಳಸ, ಪಾಂಡ್ಯ, ಚಂದಿ (ಜಿಂಜಿ) ಮುಂತಾದ ಸೀಮೆಗಳಿಗೆ ಕಳುಹಿಸಿದಳು.

ರಾಜಾರಾಮನನ್ನು ಕೂಡಲೆ ತನಗೆ ಒಪ್ಪಿಸಬೇಕೆಂದೂ ಹಾಗೆ ಮಾಡದಿದ್ದಲ್ಲಿ ಕೆಳದಿ ರಾಜ್ಯದ ಮೇಲೆ ದಾಳಿ ಮಾಡುವ ದಾಗಿಯೂ ಔರಂಗಜೇಬನು ಚೆನ್ನಮ್ಮಾಜಿಗೆ ಹೇಳಿ ಕಳುಹಿಸಿದನು.

* (ಕೊಲ್ಹಾಪುರ ಹತ್ತಿರ ಪನ್ಹಳ)

ಕೆಳದಿ ರಾಣಿ ಮೊಗಲ್ ಸಾಮ್ರಾಟನ ಬೆದರಿಕೆಗೆ ಮಣಿಯಲಿಲ್ಲ. "ರಾಜಾರಾಮನು ನಮ್ಮ ರಾಜ್ಯದಲ್ಲಿ ಒಂಟಿಯಾಗಿ ಬಂದದ್ದು ನಿಜ, ಆದರೆ ಆತನು ನಮ್ಮ ರಾಜ್ಯ ಬಿಟ್ಟು ಹೋಗಿದ್ದಾನೆ" ಎಂಬುದಾಗಿ ಕಾಗದ ಬರೆಯಿಸಿದಳು. ಇದರಿಂದ ಸಿಡಿಮಿಡಿಗೊಂಡ ಔರಂಗಜೇಬನು ಕೆಳದಿ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳುವಂತೆ ತನ್ನ ಮಗನಾದ ಅಜಮತಾರನಿಗೆ ಅಪ್ಪಣೆ ಮಾಡಿದನು. ೧೬೯೦ ರಲ್ಲಿ ಮೊಗಲರ ಭಾರಿ ಸೇನೆ ಕೆಳದಿ ರಾಜ್ಯದ ಮೇಲೆ ಏರಿ ಹೋಯಿತು. ರಾಣಿ ಚೆನ್ನಮ್ಮಾಜಿ ಆ ದುರ್ಧರ ಪ್ರಸಂಗದಲ್ಲಿ ಧೈರ್ಯಗೆಡದೆ ದೊಡ್ಡ ಸೈನ್ಯವನ್ನು ಸೇರಿಸಿ ಶತ್ರುಗಳ ವಿರುದ್ಧ ಹೋರಾಡಿದಳು. ಗುಡ್ಡಗಾಡು ಪ್ರದೇಶದಲ್ಲಿ ಯುದ್ಧ ಮಾಡುವ ಕಲೆ ಗೊತ್ತಿಲ್ಲದ ಮೊಗಲ್ ಸೈನಿಕರು ಆ ಮಲೆನಾಡಿನಲ್ಲಿ ಸಿಕ್ಕು ಕಕ್ಕಾವಿಕ್ಕಿಯಾದರು. ಮೊಗಲ ಸೇನೆ ಸೋಲನ್ನು ಅನುಭವಿಸಿ ಹಿಮ್ಮೆಟ್ಟಿತು. ರಾಣಿ ಚೆನ್ನಮ್ಮಾಜಿಯ ಧವಳ ಕೀರ್ತಿ ಎಲ್ಲೆಡೆಗಳಲ್ಲಿಯೂ ಪಸರಿಸಿತು.

ಚೆನ್ನಮಾಜಿಯು ಶಿವಾಜಿಯ ಮಗ ರಾಜರಾಮನಿಗೆ ಆಶ್ರಯವಿತ್ತು, ಮೊಗಲರನ್ನು ಸೋಲಿಸಿ ಅವನಿಗೆ ರಕ್ಷಣೆ ಒದಗಿಸಿದ ಘಟನೆಯು ಭಾರತದ ಇತಿಹಾಸದ ಮೇಲೆಯೇ ಅದರ ಪರಿಣಾಮ ಬೀರಿತೆಂದು ಡಾ. ಬಿ. ಎ. ಸಾಲೆತ್ತೂರರು "ಕನ್ನಡ ನಾಡಿನ ಚರಿತ್ರೆ"ಯಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಮರಾಠಾ ರಾಜ್ಯವು ಅತ್ಯಂತ ಗಂಡಾಂತರಕಾರಿ ಸ್ಥಿತಿಯಲ್ಲಿದ್ದಾಗ ಚೆನ್ನಮ್ಮಾಜಿಯು ರಾಜಾರಾಮನಿಗೆ ಆಶ್ರಯ ಕೊಟ್ಟು ಅಮೋಘ

ಸೇವೆ ಸಲ್ಲಿಸಿದಳೆಂದು ಶ್ರೀ ಟಿ. ಎಸ್. ಶೆಜವಳಕರರು ಪ್ರಶಂಸಿಸಿದ್ದಾರೆ.

ಚೆನ್ನಮ್ಮಾಜಿಯು ಧರ್ಮ ಮತ್ತು ಧಾರ್ಮಿಕ ಸಂಸ್ಥೆಗಳಲ್ಲಿ ತುಂಬ ಆಸಕ್ತಿ ವಹಿಸಿದ್ದಳು. ಶೃಂಗೇರಿ ಮಠಕ್ಕೆ ಪರಂಪರಾಗತವಾದ ರಾಜಾಶ್ರಯವನ್ನು ಮುಂದುವರಿಸಿದಳು. 'ಸೋಮಶೇಖರಪುರ' ಎಂಬ ಅಗ್ರಹಾರ ಕಟ್ಟಿಸಿ, ಬ್ರಾಹ್ಮಣರಿಗೆ ವೃತ್ತಿಗಳನ್ನು ಕೊಟ್ಟಳು. ಜಂಗಮರಿಗಾಗಿ ಮಠಗಳನ್ನು ಕಟ್ಟಿಸಿದಳು. ಈಕೆಯು ಒಮ್ಮೆ ೧,೯೬೦೦೦ ಲಿಂಗಾಯತರಿಗೆ ದಾಸೋಹ ಮಾಡಿಸಿದಳಂತೆ.

ಚೆನ್ನಮ್ಮಾಜಿಗೆ ಸಂತಾನವಿಲ್ಲದ್ದರಿಂದ ಬಸಪ್ಪನೆಂಬ ಬಾಲಕನನ್ನು ದತ್ತು ಮಾಡಿಕೊಂಡಳು. ಆವನಿಗೆ ಯೋಗ್ಯವಾದ ಶಿಕ್ಷಣ ಕೊಡಿಸಿದಳು. ಬಸವಪ್ಪನಾಯಕನು ಚೆನ್ನಮ್ಮಾಜಿಯ ಆಳಿಕೆಯ ನಂತರ ಕೆಳದಿ ರಾಜ್ಯವನ್ನು ಕ್ರಿ. ಶ. ೧೬೯೭ ರಿಂದ ೧೭೧೪ ರ ವರೆಗೆ ಆಳಿದನು.

ಚೆನ್ನಮ್ಮಾಜಿಯು ತನ್ನ ಅಸಾಧಾರಣ ಕರ್ತೃತ್ವ ಶಕ್ತಿಯಿಂದ ಕೆಳದಿ ರಾಜ್ಯದ ಆಂತರಿಕ ಮತ್ತು ಬಾಹ್ಯ ಶತ್ರುಗಳನ್ನು ನಿಗ್ರಹಿಸಿ, ಶಾಂತಿ-ಸುವ್ಯವಸ್ಥೆಗಳನ್ನು ಕಾಪಾಡಿದಳು. ದತ್ತುಮಗ ಬಸಪ್ಪ ನಾಯಕನಿಗೆ ಈ ರಾಣಿಯು ಕೊಟ್ಟ ಉಪದೇಶವು ಈಕೆಯ ಮುತ್ಸದ್ದಿತನಕ್ಕೆ ನಿದರ್ಶನವಾಗಿದೆ. ಚೆನ್ನಮ್ಮಾಜಿಯ ಗುಣಾತಿಶಯಗಳನ್ನು ಲಿಂಗಣ್ಣ ಕವಿ ಹೀಗೆ ವರ್ಣಿಸಿದ್ದಾನೆ :

ಉನ್ನತ ಶುಭಗುಣಗಣ ಸಂ।
ಪನ್ನತೆಯಿಂ ಕ್ಷಾತ್ರವಾನಧರ್ಮಾದಿಗಳಿಂ ||

ಚೆನ್ನಮ್ಮಾಜಿಗೆ ಸರಿಯಹ
ಮನ್ನೆಯರಿಲ್ಲೆನಿಸಿ ರಾಜ್ಯಮಂ ರಕ್ಷಿಸಿದಳ್ ||

## ಬಸವಪ್ಪನಾಯಕ (೧೬೯೭–೧೭೧೪)

ಚೆನ್ನಮ್ಮಾಜಿಯ ದತ್ತುಮಗ ಬಸವಪ್ಪನಾಯಕನು ಕೆಳದಿಯ ಶ್ರೇಷ್ಠ ಅರಸರಲ್ಲಿ ಒಬ್ಬನು. ಈತನು ಚೆನ್ನಬಸವಪ್ಪನೆಂಬವನೊಡನೆ ಸೇನೆಯನ್ನು ಕಳುಹಿಸಿ ದುಷ್ಟರಿಗೆ ಆಶ್ರಯಸ್ಥಾನವಾಗಿದ್ದ ನವಿಲೆಗಡವನ್ನು (ಅರಬ್ಬೀ ಸಮುದ್ರದಲ್ಲಿ) ಸ್ವಾಧೀನಪಡಿಸಿಕೊಂಡನು. ಕೆಳದಿಯವರಿಗೂ ಮೈಸೂರಿನವರಿಗೂ ಯಾವಾಗಲೂ ದ್ವೇಷವಿದ್ದೇ ಇತ್ತು. ಬಸವಪ್ಪನಾಯಕನು ಆ ಹಗೆಗಳಿಂದ ಅರಕಲಗೂಡನ್ನು ಕೈವಶಮಾಡಿಕೊಂಡು ಅದರ ಮೂಲ ಹಕ್ಕುದಾರರಿಗೆ ಬಿಟ್ಟುಕೊಟ್ಟನು. ಹೊಳೆಹೊನ್ನೂರನ್ನು ಮುಸಲ್ಮಾನರಿಂದ ತೆಗೆದುಕೊಂಡನು. ಸವಣೂರ ನವಾಬರ ದಾಳಿಯನ್ನು ಹಿಮ್ಮೆಟ್ಟಿಸಿದನು. ಹೀಗೆ ಈ ದೊರೆಯು ಕೆಳದಿ ರಾಜ್ಯವನ್ನು ರಕ್ಷಿಸಿ ಸದ್ಧರ್ಮದಿಂದ ರಾಜ್ಯಭಾರ ಮಾಡಿದನು.

ಬಸವಪ್ಪನಾಯಕನ ಪಾಂಡಿತ್ಯ, ಧರ್ಮದೃಷ್ಟಿ, ಔದಾರ್ಯಗಳು ಪ್ರಶಂಸನೀಯವಾಗಿವೆ. ಘನ ವಿದ್ವಾಂಸನಾಗಿದ್ದ ಈ ದೊರೆಯು ಸಂಸ್ಕೃತದಲ್ಲಿ 'ಶಿವತತ್ವರತ್ನಾಕರ' ಎಂಬ ಉದ್ಗ್ರಂಥವನ್ನೂ 'ಸುರದ್ರುಮ' ಎಂಬ ಕಾವ್ಯವನ್ನೂ ಬರೆದನು. 'ಸೂಕ್ತಿಸುಧಾಕರ' ಎಂಬ ಕೃತಿಯ ಕರ್ತೃ ಈತನೇ. ಈ ಅರಸು ಸ್ವತಃ ಪಂಡಿತನಾಗಿದ್ದನಲ್ಲದೆ ವಿದ್ವಜ್ಜನ ಪೋಷಕನೂ ಆಗಿದ್ದನು. ಆದ್ದರಿಂದ ಇವನಿಗೆ 'ಸೂರಿನಿಕರಕಲ್ಪದ್ರುಮ' ಎಂಬ ಬಿರುದಿತ್ತು. ಈ

ದೊರೆಯ ಆಸ್ಥಾನದಲ್ಲಿ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಘನ ವಿದ್ವಾಂಸರಿದ್ದರೆಂದು ತಿಳಿದು ಬರುತ್ತದೆ.

ಧರ್ಮಾತ್ಮನಾದ ಬಸವಪ್ಪನಾಯಕನು ಮಠ, ಸತ್ರಗಳನ್ನು ಸ್ಥಾಪಿಸಿ, ದಾಸೋಹ ಮೊದಲಾದವುಗಳು ನಡೆಯುವಂತೆ ಏರ್ಪಾಡು ಮಾಡಿದನು. ಕಾರ್ತಿಕಮಾಸದಲ್ಲಿ ಪ್ರತಿ ಸೋಮವಾರ ಜಂಗಮರಿಗೆ ಪಾದಪೂಜೆ ಮಾಡುವ ಪದ್ಧತಿಯನ್ನು ಆರಂಭಿಸಿದನು. ವೇಣುಪುರಿ ನದಿಗೆ ಕಲ್ಲಿನ ಸೇತುವೆ ಕಟ್ಟಿಸಿದನು. ದೇವಭಕ್ತರಿಗೆ ಅನ್ನದಾನ, ಶಿಶುಗಳಿಗೆ ಹಾಲು-ಬೆಣ್ಣೆ ದಾನ ಮಾಡುವ ಏರ್ಪಾಡು ಮಾಡಿದ್ದನು. ತಾಯಿ ಚೆನ್ನಮ್ಮಾಜಿಯು ಕಾಲವಾದ ದಿವಸ (ಪ್ರತಿವರ್ಷ ಶ್ರಾವಣ ಶು॥ ೧೪) ಭಗವದ್ಭಕ್ತರಿಗೆ, ಅನಾಥರಿಗೆ, ಅನ್ನದಾನ, ವಸ್ತ್ರದಾನ ಮಾಡುವ ಹಾಗೆ ಸ್ಥಿರವಾದ ಕಟ್ಟಳೆ ಮಾಡಿದನು. ಕೆಳದಿಯ ವೀರಭದ್ರ ದೇವಸ್ಥಾನದ ಶಿಲಾಮಯದ ಕೆಲಸದ ಗತಿಯನ್ನು ಪೂರ್ಣವಾಗಿಸಿದನು. ಶೃಂಗೇರಿ ಮಠದ ಗುರುಗಳಾಗಿದ್ದ ಸಚ್ಚಿದಾನಂದ ಭಾರತಿಗಳನ್ನು ಬಹು ಸತ್ಕರಿಸಿದನು. ಬಸವಪ್ಪನಾಯಕನ ಗುಣಾತಿಶಯಗಳನ್ನು ಲಿಂಗಣ್ಣ ಕವಿ ಈ ರೀತಿ ಬಣ್ಣಿಸಿದ್ದಾನೆ :

ವಿಲಸತ್ಸಮಸ್ತ ಶಾಸ್ತ್ರಂ
ಗಳನುರೆ ಸಂಗ್ರಹಿಸಿ ಸರ್ವವಿದ್ವಜ್ಜನಸಂ।
ಕುಲಮುಂ ರಕ್ಷಿಸಿ ಧರ್ಮದೊ
ಳಿಳೆಯುಂ ಪಾಲಿಸಿದನೊಲ್ದು ಬಸವಮಹೀಶಂ ॥

ಬಸವಪ್ಪನಾಯಕನ ತರುವಾಯ ಆತನ ಹಿರಿಯ ಮಗ ಇಮ್ಮಡಿ ಸೋಮಶೇಖರನಾಯಕನು ಕ್ರಿ. ಶ. ೧೭೧೪ ರಿಂದ

೧೭೩೯ ರ ವರೆಗೆ ರಾಜ್ಯಭಾರ ಮಾಡಿದನು. ಸೋದೆಯವರು ಕೆಳದಿಯ ದೊರೆಯೊಡನೆ ಸ್ನೇಹ ಬೆಳೆಸಿದರು. ಪ್ರಬಲನಾಗಿದ್ದ ಚಿತ್ರದುರ್ಗದ ಭರಮಪ್ಪನಾಯಕನು ಹರಪನಹಳ್ಳಿ ಸೀಮೆಯ ಮೇಲೆ ನುಗ್ಗಿದಾಗ ಇಮ್ಮಡಿ ಸೋಮಶೇಖರನಾಯಕನು ದಂಡೆತ್ತಿ ಹೋಗಿ ಭರಮಪ್ಪನಾಯಕನ ಮದವನ್ನು ಅಡಗಿಸಿದನು. ಶೃಂಗೇರಿ ಮಠದ ಸಚ್ಚಿದಾನಂದಭಾರತಿ ಸ್ವಾಮಿಗಳನ್ನು ವೇಣುಪುರದರ ಮನೆಗೆ ಬರಮಾಡಿಕೊಂಡು, ಅವರನ್ನು ಸತ್ಕರಿಸಿದನು. ಶೃಂಗೇರಿ ಮಠದ ಸಾಲವನ್ನೆಲ್ಲ ತೀರಿಸಿ ಸ್ವಾಮಿಗಳನ್ನು ಸಕಲ ಮರ್ಯಾದೆಯೊಡನೆ ಬೀಳ್ಕೊಟ್ಟನು. ಈ ದೊರೆಯು ಕೊಲ್ಲೂರು ಮೂಕಾಂಬಿಕೆ, ಕೆಳದಿ ರಾಮೇಶ್ವರ, ವೀರಭದ್ರದೇವರು, ಶೃಂಗೇರಿ ಮಠದಲ್ಲಿ ಶಾರದಾಂಬೆ, ಸುಬ್ರಹ್ಮಣ್ಯದಲ್ಲಿ ಸುಬ್ರಹ್ಮಣ್ಯಸ್ವಾಮಿ, ಕೋಟೇಶ್ವರದಲ್ಲಿ ಕೋಟಿಲಿಂಗೇಶ್ವರ, ಗೋಕರ್ಣದ ಮಹಾಬಲೇಶ್ವರ ಇವೇ ಮೊದಲಾದ ಪವಿತ್ರ ಕ್ಷೇತ್ರಗಳಲ್ಲಿ ದೇವರ ಸೇವೆಗೈದು ಬಿದನೂರಿಗೆ ಮರಳಿ ಬಂದನು.

ಇಮ್ಮಡಿ ಸೋಮಶೇಖರನಾಯಕನು ಕೆಳದಿಯ ಶ್ರೇಷ್ಠ ಅರಸರಲ್ಲಿ ಒಬ್ಬನು. ಇವನು ಕೆಳದಿ ರಾಜ್ಯವನ್ನು ಹೊರಗಿನ ಶತ್ರುಗಳಿಂದ ರಕ್ಷಿಸಿ, ಪ್ರಜೆಗಳಿಗೆ ಶಾಂತಿ, ಸುವ್ಯವಸ್ಥಿತ ಆಡಳಿತೆಯನ್ನು ಒದಗಿಸಿದನು. ಈ ದೊರೆಗೆ ಸಂತಾನವಿರಲಿಲ್ಲ. ಇವನ ನಂತರ ಬಲತಮ್ಮನ ಮಗ ಇಮ್ಮಡಿ ಬಸಪ್ಪನಾಯಕನು ೧೭೩೯ ರಿಂದ ೧೭೫೪ ರ ವರೆಗೆ ಕೆಳದಿ ರಾಜ್ಯವಾಳಿದನು. ಈತನಿಗೆ ಮರಾಠರ ದಾಳಿಗಳನ್ನು ಎದುರಿಸುವದಾಗಲಿಲ್ಲ. ೧೭೪೮ರಲ್ಲಿ ಈ ದೊರೆ ಚಿತ್ರದುರ್ಗದ ಸೈನ್ಯವನ್ನು ಪರಾಭವಗೊಳಿಸಿದನು.

ಈ ಯುದ್ಧದಲ್ಲಿ ಚಿತ್ರದುರ್ಗದ ಪಾಳೆಗಾರ ಮದಕರಿನಾಯಕನು ಹತನಾದನು.

ಇಮ್ಮಡಿ ಬಸಪ್ಪನಾಯಕನ ತರುವಾಯ ಅವನ ದತ್ತು ಮಗ ಚೆನ್ನಬಸವಪ್ಪನಾಯಕನು (೧೭೫೪-೧೭೫೭) ಹೆಸರಿಗೆ ಮಾತ್ರ ಅರಸನಾಗಿದ್ದನು. ರಾಜ್ಯದ ಅಧಿಕಾರ ಸೂತ್ರಗಳೆಲ್ಲ ಆತನ ದತ್ತುತಾಯಿ ವೀರಮ್ಮಾಜಿಯ ಕೈಯಲ್ಲಿದ್ದುವು. ಕ್ರಿ. ಶ. ೧೭೫೭ ರಲ್ಲಿ ಚೆನ್ನಬಸವನಾಯಕನು ಮಡಿದನು. ವೀರಮ್ಮಾಜಿಯು ಮುಮ್ಮಡಿ ಸೋಮಶೇಖರನಾಯಕನೆಂಬ ಬಾಲಕನನ್ನು ದತ್ತು ತೆಗೆದುಕೊಂಡು ತಾನೇ ಕೆಳದಿ ರಾಜ್ಯಭಾರ ನಡೆಸಿದಳು.

ವೀರಮ್ಮಾಜಿ (೧೭೫೭-೧೭೬೩) ಜಾಣಾಕ್ಷವಂತಿಯೂ ಶೂರಳೂ ಆಗಿದ್ದಳು. ಕೆಳದಿ ರಾಜ್ಯದ ರಕ್ಷಣೆಗಾಗಿ ಶಕ್ತಿಮೀರಿ ಹೋರಾಡಿದಳು. ೧೭೬೩ ರಲ್ಲಿ ಹೈದರ್ ಅಲಿ ಬಿದನೂರನ್ನು ಸ್ವಾಧೀನಪಡಿಸಿಕೊಳ್ಳಲು ದಂಡೆತ್ತಿ ಬಂದನು. ಆಗ ಶತ್ರುವಿನ ಕೈಮೇಲಾದದ್ದನ್ನು ಕಂಡು ರಾಣಿ ವೀರಮ್ಮಾಜಿ ಬಿದನೂರನ್ನು ಬಿಟ್ಟು ಬಲ್ಲಾಳ ರಾಯನ ದುರ್ಗಕ್ಕೆ ಹೋದಳು. ಹೈದರ್‌ಅಲಿ ಬಿದನೂರನ್ನು ಸಹಜವಾಗಿ ಹಿಡಿದುಕೊಂಡನು. ಅನಂತರ ವೀರಮ್ಮಾಜಿ ಮತ್ತು ಮುಮ್ಮಡಿ ಸೋಮಶೇಖರ ನಾಯಕನನ್ನು ಸೆರೆ ಹಿಡಿದು ಮಧುಗಿರಿ ಕೋಟೆಗೆ ಸಾಗಿಸಿದನು. ೧೭೬೭ರಲ್ಲಿ ಮರಾಠರು ಆ ಕೋಟೆಯನ್ನು ಸಾಧಿಸಿದ ನಂತರ ವೀರಮ್ಮಾಜಿ ಮತ್ತು ಮುಮ್ಮಡಿ ಸೋಮಶೇಖರ ನಾಯಕರನ್ನು ಬಿಡುಗಡೆ ಮಾಡಿದರು. ವೀರಮ್ಮಾಜಿ ಪುಣೆಗೆ ಹೋಗುವಾಗ ದಾರಿ

ಯಲ್ಲಿಯೇ ಮಡಿದಳು. ಹೀಗೆ ಕೆಳದಿ ಅರಸುಮನೆತನದ ಪ್ರಭುತ್ವ ಕೊನೆಗೊಂಡಿತು,

ವೀರಮ್ಮಾಜಿಯು ಹಿಂದಿನ ಖ್ಯಾತ ಅರಸರ ಸಮಾನಳೆಂದು ಹೇಳಲು ಬರುವಂತಿಲ್ಲವಾದರೂ ಆಕೆಯ ಪರಾಕ್ರಮ, ಸಾಹಸ, ಸ್ವದೇಶಪ್ರೇಮ, ಔದಾರ್ಯಗಳಿಗೆ ಅನೇಕ ಉದಾಹರಣೆಗಳಿವೆ. ಹೈದರ್ ಆಲಿಯ ಮಗನಾದ ಟೀಪೂ ಸುಲ್ತಾನನ ಆಸ್ಥಾನದಲ್ಲಿಯ ಚರಿತ್ರಕಾರನಾಗಿದ್ದ ಕಿರ್ಮಾನಿ ಸಹ, ವೀರಮ್ಮಾಜಿಯು ಹೈದರ್ ಆಲಿಯು - ದಾಳಿಯಿಟ್ಟ ದುರ್ಭರ ಪ್ರಸಂಗದಲ್ಲಿ ಪುರುಷರ ಧೈರ್ಯ–ಸ್ಥೈರ್ಯಗಳನ್ನು ತೋರಿದಳೆಂದು ಬಾಯ್ತುಂಬ ಹೊಗಳಿದ್ದಾನೆ. ಈ ರಾಣಿಯು ಶತ್ರುಗಳ ವಿರುದ್ಧ ಹೂಡಿದ ಧೀರ ಹೋರಾಟ, ತನ್ನ ರಾಜಧಾನಿಯ ರಕ್ಷಣೆಗಾಗಿ ಮಾಡಿದ ಕೆಚ್ಚೆದೆಯ ಸಾಹಸ, ಅಂತಹ ವಿಷಮ ಗಳಿಗೆಯಲ್ಲಿಯೂ ತನ್ನ ಸೈನಿಕರಲ್ಲಿ ಅಪಾರ ವೀರಾವೇಶ ತುಂಬಿಸಿ ರಕ್ಷಣಾಕಾರ್ಯದಲ್ಲಿ ಹತಪ್ರಭರಾಗದಂತೆ ಅವರವರ ಸೈನಿಕ ನೆಲೆಗಳಲ್ಲಿ ನಿಲ್ಲಿಸಿದ್ದು, ಮಹಾಸೇನೆಯ ದಳಪತಿಯಾಗಿ ದಂಡೆತ್ತಿ ಬಂದಿದ್ದ ಮುಸಲ್ಮಾನನೊಬ್ಬನ (ಹೈದರ್ ಆಲಿ) ವಿರುದ್ಧ ಹೋರಾಡಲು ಮತ್ತೊಬ್ಬ ಮುಸಲ್ಮಾನ ದೊರೆಯ ಸೈನಿಕ ಸಹಾಯವನ್ನು ಪಡೆಯುವಲ್ಲಿ ಆಕೆಯು ತೋರಿದ ರಾಜತಂತ್ರಪಟುತ್ವ ಇವುಗಳನ್ನು ಅದೇ ಕಿರ್ಮಾನಿ ಮುಕ್ತಕಂಠದಿಂದ ಶ್ಲಾಘಿಸಿದ್ದಾನೆಂಬುದು ಗಮನಾರ್ಹವಾದ ವಿಷಯ. ವೀರಮ್ಮಾಜಿಯ ಧೀರ ವ್ಯಕ್ತಿತ್ವ ಕುರಿತು ಇದೊಂದು ಯೋಗ್ಯ ಪ್ರಶಸ್ತಿ. ಕಿರ್ಮಾನಿಯು ಹೈದರ ಆಲಿಯ ಸೇವೆಯಲ್ಲಿದ್ದನು. ಅಂಥವನ ಈ ಹೇಳಿಕೆಗೆ ತುಂಬ ಬೆಲೆಯುಂಟು.

ಹಿರಿಯಬಸವಪ್ಪನಾಯಕನ ತರುವಾಯ ಬಂದ ದೊರೆಗಳ ಅಸಮರ್ಥತೆ, ರಾಜ್ಯದಲ್ಲಿ ಅಂತಃಕಲಹಗಳು, ಪಿತೂರಿಗಳು, ಸಮರ್ಥ ಗೂಢಚಾರವ್ಯವಸ್ಥೆಯ ಅಭಾವ, ಕೆಳದಿ ನಾಯಕರ ಹಳೆಯ ಮಾದರಿಯ ಸೈನ್ಯಸಂಘಟನೆ ಮತ್ತು ಬಲಾಢ್ಯ ನೌಕಾ ಪಡೆಯಿಲ್ಲದಿದ್ದುದು-- ಇವೆಲ್ಲ ಕೆಳದಿ ಅಧಿಪತ್ಯದ ಪತನಕ್ಕೆ ಬಹು ಮುಖ್ಯವಾದ ಕಾರಣಗಳು. ಬಲಾಢ್ಯ ಸೈನ್ಯ, ಆಧುನಿಕ ಶಸ್ತ್ರಾಸ್ತ್ರ, ಸಮರ್ಥವಾದ ಗೂಢಚಾರ ವ್ಯವಸ್ಥೆ ಹೊಂದಿದ್ದ ಹೈದರ ಅಲಿಗೆ ಕೆಳದಿ ರಾಜ್ಯವನ್ನು ಗೆಲ್ಲುವದು ಸುಲಭ ಸಾಧ್ಯ ವಾಯಿತು.



## ೭. ಉಪಸಂಹಾರ.

ಕೆಳದಿ ಚರಿತ್ರೆಯು ಕರ್ನಾಟಕದ ಉಜ್ವಲ ಇತಿಹಾಸದಲ್ಲಿ ಒಂದು ಮಹತ್ವದ ಅಧ್ಯಾಯ. ಈ ಅರಸುಮನೆತನದ ಚರಿತ್ರೆಯು ಕನ್ನಡಿಗರಿಗೆ ಉದ್ಬೋಧಕವೂ ಸ್ಫೂರ್ತಿದಾಯಕವೂ ಆಗಿದೆ.

ಕೆಳದಿ ಅರಸುಮನೆತನದ ದೊರೆಗಳು ಕರ್ನಾಟಕ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವಲ್ಲಿ ಗಮನಾರ್ಹವಾದ ಪಾತ್ರವಹಿಸಿದರು. ಈ ಮನೆತನವು ಇಬ್ಬರು ಶ್ರೇಷ್ಠ ರಾಣಿಯರಿಗೆ ಜನ್ಮವಿತ್ತಿದೆ. ಕೆಳದಿ ಅರಸರು ವಿಜಯನಗರ ಸಾಮ್ರಾಜ್ಯದ ಭವ್ಯ ಪರಂಪರೆಯನ್ನು ಮುಂದುವರಿಸಿಕೊಂಡು ಬಂದು, ನಾಡು-ನುಡಿಗಳ ಸೇವೆಗೈದರು.

ಕೆಳದಿ ಅರಸರ ಗುಣಾತಿಶಯಗಳು ಕೆಳದಿ ಚರಿತ್ರೆಯ ಓದುಗರ ಮನಸ್ಸಿನ ಮೇಲೆ ಅಚ್ಚೊತ್ತಿಯದೆ ಉಳಿಯದಿರಲಾರವು. ಚೌಡಪ್ಪನ ದೈವಭಕ್ತಿ, ಕರ್ತೃತ್ವಶಕ್ತಿ, ಸದಾಶಿವನಾಯಕನ ಮಹಾಪರಾಕ್ರಮ, ದೊಡ್ಡ ಸಂಕಣ್ಣನಾಯಕ ಘನ ವೈರಾಗ್ಯ, ಚಿಕ್ಕ ಸಂಕಣ್ಣ ನಾಯಕನ ಸ್ವಾಮಿನಿಷ್ಠೆ, ಹಿರಿಯ ವೆಂಕಟಪ್ಪನಾಯಕನ ಶೌರ್ಯ, ರಾಜಕಾರಣಪಟುತ್ವ, ಶಿವಪ್ಪನಾಯಕನ ಶಿಸ್ತು, ಮುತ್ಸದ್ದಿತನ, ಹಿರಿಯ ಬಸಪ್ಪನಾಯಕನ ಪಾಂಡಿತ್ಯ, ಚೆನ್ನಮ್ಮಾಜಿಯ ಮತ್ತು ವೀರಮ್ಮಾಜಿಯ ಅಸಾಧಾರಣ ಸಾಮರ್ಥ್ಯ, ಇವೆಲ್ಲಕ್ಕೂ ಮಿಗಿಲಾಗಿ ಕೆಳದಿ ಅರಸರ ಧರ್ಮಸಹಿಷ್ಣುತೆ ಮತ್ತು ಸಮದರ್ಶಿತ್ವ ಪ್ರಶಂಸಾರ್ಹವಾಗಿವೆ.

ಕೆಳದಿ ನಾಯಕರು ವಿದ್ಯೆ, ಕಲೆ ವಾಸ್ತುಶಿಲ್ಪಗಳ ಅಭಿವೃದ್ಧಿ ಸಾಧಿಸಿದರು. ಅನೇಕ ವಿದ್ವನ್ಮಣಿಗಳಿಗೆ ಉದಾರ ರಾಜಾಶ್ರಯ ವಿತ್ತರು. ಹಿರಿಯ ವೆಂಕಟಪ್ಪನಾಯಕ ಮತ್ತು ಹಿರಿಯ ಬಸವಪ್ಪನಾಯಕರ ಕಾಲದಲ್ಲಿ ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಉಚ್ಚಮಟ್ಟದ ಕೃತಿಗಳು ರಚಿತವಾದುವು. ಹಿರಿಯ ವೆಂಕಟಪ್ಪ ನಾಯಕನು ವಿಶಿಷ್ಟಾದ್ವೈತವಾದ ಸಮರ್ಥನಾದ ಜತ್ರು ಶಾಸ್ತ್ರ ಪಂಡಿತನೆನಿಸಿದ ರಾಮಾನುಜಾಚಾರ್ಯ ಮತ್ತು ಕಾಶಿಯಿಂದ ಬಂದ ಘಟಕವಿದ್ವಾಂಸನಾದ ಭಟ್ಟೋಜಿದೀಕ್ಷಿತ ಇವರ ನಡುವೆ ವಾದವನ್ನು ಏರ್ಪಡಿಸಿದುದು ಆ ದೊರೆಯ ಆಳ್ವಿಕೆಯಲ್ಲಿ ಜರುಗಿದ ಗಮನಾರ್ಹವಾದ ಘಟನೆಗಳಲ್ಲೊಂದು. ವಾದ ಪ್ರಸಂಗದಲ್ಲಿ ರಾಮಾನುಜಾಚಾರ್ಯ ಸೋತನು. ಅವನ ವಿಶೇಷ ಬಿರುದುಗಳು ಭಟ್ಟೋಜಿ ದೀಕ್ಷಿತನ ವಶವಾದುವು. ಈ ಸಂದರ್ಭದಲ್ಲಿ ಹಿರಿಯ ವೆಂಕಟಪ್ಪನಾಯಕನಿಗೆ " ವಿಶಿಷ್ಟ ವೈದಿಕಾದ್ವೈತ ಸಿದ್ಧಾಂತಸ್ಥಾಪನಾಚಾರ್ಯ " ಎಂಬ ಬಿರುದಿನ ಪ್ರೌಗಳ್ಕೆಯಭಿಧಾನ ಪ್ರಾಪ್ತವಾಯಿತೆಂದು ಲಿಂಗಣ್ಣ ಕವಿ ಕೆಳದಿನೃಪವಿಜಯದಲ್ಲಿ ಹೇಳಿದ್ದಾನೆ.

ಕೆಳದಿ ನಾಯಕರು ಕಲಾಪ್ರಪಂಚಕ್ಕೆ ಗಮನಾರ್ಹವಾದ ಕಾಣಿಕೆಗಳನ್ನು ಸಲ್ಲಿಸಿದರು. ಹೊಯ್ಸಳ, ದ್ರಾವಿಡ ವಾಸ್ತುಶಿಲ್ಪ ವೈಶಿಷ್ಟ್ಯಗಳ ಸುಂದರ ಸಮನ್ವಯದಲ್ಲಿ ರಚಿತವಾದ ಇಕ್ಕೇರಿಯ ಅಘೋರೇಶ್ವರ ದೇವಾಲಯವು ಅಮೋಘ ಕಲಾಕೃತಿಯಾಗಿದೆ. ಈ ದೇವಾಲಯದಲ್ಲಿರುವ ಮುಖಮಂಟಪದ ಕಂಬಗಳ ಮೇಲಿನ ಕೆತ್ತನೆಯ ಕೆಲಸ ತುಂಬ ಆಕರ್ಷಕವಾಗಿದೆ. ಅಘೋರೇಶ್ವರ



ಕೆಳದಿಯ ವೀರಭದ್ರ ದೇವಸ್ಥಾನದಲ್ಲಿಯ ರಾಜಲಾಂಛನವಾದ ಗಂಡ ಭೇರುಂಡ

ಲಿಂಗದ ಎದುರಿಗಿರುವ ನಂದಿಮಂಟಪ ಇನ್ನೊಂದು ಉತ್ಕೃಷ್ಟ ಕಲಾಕೃತಿ. ಈ ಮಂಟಪದ ಶಿಲಾಮಯವಾದ ಗೋಡೆಗಳ ಮೇಲೆ ಕೆತ್ತಿದ ನರ್ತಕಿಯರ, ನಗಾರಿ ಬಾರಿಸುವವರ, ಸೇವಕರ, ಕಾಳಿ ಮರ್ದನ ಇತ್ಯಾದಿ ದೃಶ್ಯಗಳು ಮನಮೋಹಕವಾಗಿವೆ. ಅಘೋರೇಶ್ವರ ದೇವಾಲಯದ ಪಶ್ಚಿಮ ಭಾಗಕ್ಕಿರುವ ಪಾರ್ವತಿದೇವಿಯ ಗುಡಿಯೂ ಬಹು ಸುಂದರವಾಗಿದೆ. ಕೆಳದಿಯ ರಾಮೇಶ್ವರ ದೇವಾಲಯವನ್ನು ಹೊಯ್ಸಳ–ದ್ರಾವಿಡ ಮಿಶ್ರಶೈಲಿಯಲ್ಲಿ ನಿರ್ಮಿಸಲಾಗಿದೆ. ಇದೇ ಮಾದರಿಯಲ್ಲಿ ನಿರ್ಮಿತವಾದ ವೀರಭದ್ರ ದೇವಸ್ಥಾನವು ಹೆಚ್ಚು ಕಲಾತ್ಮಕವೂ ಆಕರ್ಷಣೀಯವೂ ಆಗಿದೆ. ಬಿದನೂರಿನ (ನಗರ) ನೀಲಕಂಠೇಶ್ವರ ದೇವಾಲಯ, ಆಂಜನೇಯ ದೇವಸ್ಥಾನ, ಗುಡ್ಡೆ ವೆಂಕಟರಮಣ ದೇವಾಲಯ ಮಲೆನಾಡ ವಾಸ್ತುಶಿಲ್ಪದ ವಿಶಿಷ್ಟ ಮಾದರಿಗಳೆನಿಸಿವೆ.

ಕೆಳದಿಯ ವೀರಭದ್ರ ದೇವಸ್ಥಾನದ ಅಂಗಣದಲ್ಲಿ ಕೆಳದಿ ನಾಯಕರ ರಾಜಲಾಂಛನವಾದ ಗಂಡಭೇರುಂಡವು ಕೆತ್ತಲ್ಪಟ್ಟಿದೆ. ಭುವನಗಿರಿದುರ್ಗದ ಕಾಶೀವಿಶ್ವೇಶ್ವರ ದೇವಾಲಯವು ಶಿಲ್ಪಕಲಾ ವೈಭವದಿಂದ ಕೂಡಿದೆ. ವರದಾಮೂಲದಲ್ಲಿಯ ಸದಾಶಿವ ದೇವಸ್ಥಾನದ ದ್ವಾರವು ಚಾಲುಕ್ಯ ವಾಸ್ತುಶಿಲ್ಪಶೈಲಿಯಲ್ಲಿ ನಿರ್ಮಿತವಾಗಿದೆ. ಈ ದೇವಸ್ಥಾನದ ಶಿಲಾಸ್ತಂಭಗಳು ಮತ್ತು ದ್ವಾರವು ಉತ್ಕೃಷ್ಟವಾಗಿಯೂ ಕಲಾತ್ಮಕವಾಗಿಯೂ ಇವೆ.

ಕೆಳದಿ ನಾಯಕರು ಕಟ್ಟಿಸಿದ ಅರಮನೆಗಳು, ಸಾರ್ವಜನಿಕ ಭವನಗಳು ಅಳಿದುಳಿದು ನಿಂತಿವೆ. ಬಿದನೂರಿನಲ್ಲಿ (ನಗರ) ಶಿವಪ್ಪ ನಾಯಕನ ಅರಮನೆಯ ಅವಶೇಷಗಳನ್ನು ಕಾಣಬಹುದು. ಕೆಳದಿ

ನಾಯಕರು ಕಟ್ಟಿಸಿದ ಮಹತ್ವದ ಕಟ್ಟಡಗಳಲ್ಲಿ (ವೆಂಕಟಪ್ಪ ನಾಯಕನ ಕಾಲದ) ಆನಂದಪುರದಲ್ಲಿರುವ ಚಂಪಕಸರಸಿ ಮಠ ಮತ್ತು ಅದರಲ್ಲಿರುವ ಚಂಪಕಸರಸ ಎಂಬ ತಟಾಕ ಗಮನಾರ್ಹವಾಗಿವೆ.

ಬಿದನೂರಿನಲ್ಲಿಯ (ನಗರ) ಕೆಳದಿ ನಾಯಕರು ಕಟ್ಟಿಸಿದ ದೇವಗಂಗಾ ಈಜುಗೊಳಗಳು ಬಹು ಮನಮೋಹಕವಾಗಿದ್ದವು. ಕೆಳದಿ ರಾಜಮನೆತನದವರು ಈ ಕೊಳಗಳಲ್ಲಿ ಜಲಕ್ರೀಡೆಯಾಡು ತ್ತಿದ್ದರು. ನಗರ ನಿರ್ಮಾಣ ಪದ್ಧತಿಯು ಶ್ರೇಷ್ಠ ಮಟ್ಟದ್ದಾಗಿತ್ತು. ಈ ನಾಯಕರು ರಾಜ್ಯದ ಆಯಕಟ್ಟಿನ ಸ್ಥಳಗಳಲ್ಲಿ ಬಲವಾದ ಕೋಟೆ-ಕೊತ್ತಲುಗಳನ್ನು ನಿರ್ಮಿಸಿದ್ದರು. ಅವುಗಳಲ್ಲಿ ಭುವನಗಿರಿದುರ್ಗದ ಕೋಟೆಯು ಅತ್ಯಂತ ದುರ್ಗಮವಾಗಿದೆ.

ಕೆಳದಿರಾಜ್ಯದಲ್ಲಿ ಅನೇಕ ಶೈವ, ವೀರಶೈವ, ವೈಷ್ಣವ ಮಠಗಳಲ್ಲದೆ, ಜೈನ ಬಸದಿಗಳು, ಮಸೀದೆಗಳು ಮತ್ತು ಚರ್ಚುಗಳು ಇದ್ದವು. ಇವು ಕೆಳದಿ ಅರಸರ ಧರ್ಮಸಹಿಷ್ಣುತೆಯ ಕುರುಹುಗಳಾಗಿವೆ.

ಒಟ್ಟಿನಲ್ಲಿ, ಕೆಳದಿ ನಾಯಕರು ಧರ್ಮ, ಕಲೆ, ಸಾಹಿತ್ಯ, ವಿದ್ಯೆ ಮುಂತಾದ ರಂಗಗಳಲ್ಲಿ ಗಮನಾರ್ಹವಾದ ಪ್ರಗತಿ ಸಾಧನೆಗೆ ಪೋಷಕವಾದ ಧೋರಣೆ ಅನುಸರಿಸಿದರು. ಅವರ ಮಹತ್ಸಾಧನೆಗಳು ಚಿರಸ್ಮರಣೀಯವಾಗಿವೆ.



# ಅನುಬಂಧ

## I ಚೆನ್ನಮ್ಮಾಜಿಯ ಉಪದೇಶ

ಕೆಳದಿಯ ರಾಣಿ ಚೆನ್ನಮ್ಮಾಜಿಯು ತನ್ನ ದತ್ತುಪುತ್ರನಾದ ಹಿರಿಯ ಬಸವಪ್ಪನಾಯಕನಿಗೆ ಮಾಡಿದ ಉಪದೇಶ ಬಹು ಮಾರ್ಮಿಕವಾಗಿದೆ, ಅದರ ಮೂಲಪಾಠ ಮತ್ತು ಅರ್ಥವನ್ನು ಕನ್ನಡದಲ್ಲಿ ಕೊಡಲಾಗಿದೆ.

**ಮೂಲಪಾಠ :**

ಉಕ್ತಂ ತ್ವಂ ನಾನ್ಯಥಾ ಬ್ರೂಯಾಃ ಕ್ವಾಪಿ ಕಾರ್ಯಂ ನ ಸಂತ್ಯಜ ।
ಮಾ ಮುಂಚ ಮಧುರಾಲಾಪಂ ನ ಬ್ರೂಯಾ ಹೃದಯಂ ಶಠೇ ॥
ಅಮಾರ್ಗೇ ನ ಪದಂ ಕುರ್ಯಾಃ ಸ್ನೇಹ ಭೇದಂ ನ ಕಾರಯ ।
ಪಾಪಂ ವಿಮುಂಚ ಸುಕೃತಂ ಕುರು ಶಂಭೋಃ ಪದಂ ಭಜ ॥
ಭಜ ಭೂತೇಷು ಕರುಣಾಂ ಸಂಶ್ರಿತಾನ್ ಪರಿಪಾಲಯ ।
ನ ನಿಂದಾಂ ರಚಯಾನ್ಯೇಷಾಂ ನ ಸ್ವೈರಮಿಹ ಸಂಚರ ॥
ಜಹಿ ಕಾಮಾದಿಕಾನ್ ದೋಷಾನ್ ಜುಗುಪ್ಸಾಂ ಚ ಭವೇ ಕುರು ।
ವ್ಯಸನೇ ಭಯಮುನ್ಮುಂಚ ಜಹೀಹಿ ವಿಭವೇ ಮದಂ ॥
ಸಂಪ್ರಧಾರಯ ತತ್ವಾನಿ ಭಾವಯಾದ್ವೈತಮಾಂತರಂ ।
ನಾತಿವರ್ತಸ್ವ ಸಮಯಂ ವೇದಜ್ಞಾಂಶ್ಚ ಸಮರ್ಚಯ ॥
ಸ್ವಪ್ನಂ ಭಾವಯ ಸಂಸಾರಂ ಕೋಹಮಿತ್ಯನುಚಿಂತಯ ।
ಹಸೇರಹಸನೀಯಸ್ತ್ವಂ ಬ್ರೂಹಿ ವಾಕ್ಯಮನುತ್ತಮಂ ॥
ಜನಸ್ತುತಿಪದಂ ಜೀವೇರನಾವೃತ್ತಿಗತಿಂ ಭಜೇಃ ।
ಶಿವಂ ಪ್ರಸಾದ್ಯ ಬಹುಧಾ ಸಂತತಾನಂದಭಾಗ್ಭವ ॥

## ಮೂಲಪಾಠದ ಅರ್ಥ

ನುಡಿದದ್ದನ್ನು ಬದಲಿಸದಿರು. ಎಂದಿಗೂ ಎಲ್ಲಿಯೂ ಕರ್ತವ್ಯಚ್ಯುತನಾಗದಿರು. ಸರ್ವದಾ ಮಧುರವಾಗಿ ಮಾತನಾಡುವಂತೆ ಎಚ್ಚರವಹಿಸು. ದುಷ್ಟರಿಗೆ ನಿನ್ನ ಹೃದ್ಗತವನ್ನು ತೋರದಿರು. ದುರ್ಮಾರ್ಗ ಹಿಡಿಯದಿರು, ಸ್ವಜನರಲ್ಲಿ ಭೇದವೆಣಿಸದಿರು. ಪಾಪ ಕಾರ್ಯ ಮಾಡದಿರು. ಸತ್ಕಾರ್ಯಗಳನ್ನು ಮಾಡು. ಸದಾ ಶಂಭುವಿನ ಪಾದಗಳನ್ನು ಧ್ಯಾನಿಸು. ಸಕಲ ಜೀವಗಳಲ್ಲಿ ದಯೆ ತೋರು. ಆಶ್ರಯ ಬಯಸಿ ಬಂದವರಿಗೆ ರಕ್ಷಣೆ ನೀಡು. ಪರರನ್ನು ನಿಂದಿಸದಿರು. ಪ್ರಪಂಚದಲ್ಲಿ ಆತ್ಮಸಂಯಮವಿಲ್ಲದೆ ನಡೆಯದಿರು. ಕಾಮಾದಿದೋಷಗಳನ್ನು ಜಯಿಸು ಮತ್ತು ಹುಟ್ಟು-ಸಾವುಗಳಿಂದ ಮುಕ್ತಿ ಪಡೆ. ವಿಪತ್ಕಾಲದಲ್ಲಿ ಕೂಡ ಧೃತಿಗೆಡದಿರು. ಸಿರಿತನ ಬಂದಾಗ ಸೊಕ್ಕದಿರು. ತತ್ತ್ವವನ್ನು ಕುರಿತು ಚಿಂತಿಸು. ಅದ್ವೈತ ತತ್ತ್ವದ ತಿರುಳನ್ನು ತಿಳಿದುಕೊ. ಸುಸಂಧಿಯನ್ನು ಕಳೆದುಕೊಳ್ಳದಿರು. ವೇದಜ್ಞರನ್ನು ಸನ್ಮಾನಿಸು. ಜೀವನವನ್ನು ಕನಸೆಂದು ತಿಳಿ. ನಾನು ಯಾರು ? ಎಂಬ ಪ್ರಶ್ನೆಯನ್ನು ವಿವೇಚಿಸು. ನೀನು ನಗೆಗೀಡಾಗದಂತೆ ನಗು. ಉತ್ತಮವಾಗಿ ಮಾತನಾಡು. ಜನಸ್ತುತಿ ಮಾಡುವ ಹಾಗೆ ನಡೆ. ಪುನರ್ಜನ್ಮತಾರದ ಮಾರ್ಗವನ್ನು ಅನುಸರಿಸು. ಶಿವನನ್ನು ವಿವಿಧ ರೀತಿಯಲ್ಲಿ ಪೂಜಿಸು ಮತ್ತು ಅನಂತ ಆನಂದವನ್ನು ಅನುಭವಿಸು.

## II ಪ್ರವಾಸಿ ಕಂಡ ಕೆಳದಿ ರಾಜ್ಯ

ಫೋರ್ಬ್ಸ್, ಪೆಟ್ರೊಡೆಲ್ಲಾವೆಲ್ಲೆ, ಪೀಟರ್ ಮುಂಡಿ, ಡಾ. ಫ್ರಾಯರ್, ಅಬೆಕೆರಿ, ಅಲೆಗ್ಸಾಂಡರ್ ಹ್ಯಾಮಿಲ್ಟನ್ ಮುಂತಾದ ವಿದೇಶಿ ಪ್ರವಾಸಿಗಳು ಭಾರತವನ್ನು ಸಂದರ್ಶಿಸಿದರು. ಇವರ ಪ್ರವಾಸ ಕಥನಗಳಲ್ಲಿ ಕೆಳದಿರಾಜ್ಯ ಮತ್ತು ನಾಯಕರ ಬಗೆಗೆ ಅನೇಕ ಉಲ್ಲೇಖಗಳು ಬಂದಿವೆ. ಇವರಲ್ಲಿ ಪೆಟ್ರೊ ಡೆಲ್ಲಾವೆಲ್ಲೆ ಮತ್ತು ಫ್ರಾಯರ್ ಮುಖ್ಯರಾದವರು. ಇಟಾಲಿಯನ್ ಪ್ರವಾಸಿ ಡೆಲ್ಲಾವೆಲ್ಲೆ ಹಿರಿಯ ವೆಂಕಟಪ್ಪನಾಯಕನ ದರಬಾರು ಮತ್ತು ಕೆಳದಿ ರಾಜ್ಯದ ಪ್ರಮುಖ ಸ್ಥಳಗಳನ್ನು ಸಂದರ್ಶಿಸಿದನು. ಇವನು ಬಹು ಸೂಕ್ಷ್ಮಗ್ರಾಹಿಯಾಗಿದ್ದನು. ತಾನು ಕಂಡ ವಸ್ತುಗಳ ಮತ್ತು ಅನುಭವಿಸಿದ ವಿಷಯಗಳ ಬಗೆಗೆ ಸವಿಸ್ತಾರವಾಗಿ ಬರೆದಿದ್ದಾನೆ. ಕ್ರಿ. ಶ. ೧೬೨೩ ರಲ್ಲಿ ಡೆಲ್ಲಾವೆಲ್ಲೆ ಪೋರ್ತುಗೀಜ ರಾಯಭಾರಿ ಯೊಂದಿಗೆ ಹಿರಿಯ ವೆಂಕಟಪ್ಪನ ರಾಜಧಾನಿಯಾಗಿದ್ದ ಇಕ್ಕೇರಿಗೆ ಬಂದಿದ್ದನು. ಡಾ. ಜಾನ್‌ಫ್ರಾಯರ್‌ನೆಂಬ ಆಂಗ್ಲ ಪ್ರವಾಸಿ ಕ್ರಿ.ಶ. ೧೬೭೨-೧೬೮೧ ಈ ಕಾಲಾವಧಿಯಲ್ಲಿ ಭಾರತ ಮತ್ತು ಪರ್ಶಿಯಾ ಗಳಲ್ಲಿ ಸಂಚರಿಸಿದನು.

### ಪ್ರಕೃತಿ ಸೌಂದರ್ಯ

ಫೋರ್ಬ್ಸ್ ಎಂಬ ಪ್ರವಾಸಿಯು (೧೭೭೫) ಕೆಳದಿ ರಾಜ್ಯದ ಒಂದು ಭಾಗವಾಗಿದ್ದ ಕೆನರಾ ಕರಾವಳಿ ಪ್ರದೇಶದ ನಿಸರ್ಗ ಸೌಂದರ್ಯವನ್ನು ಹೀಗೆ ಬಣ್ಣಿಸಿದ್ದಾನೆ :

—"ಕೆನರಾದ ಕರಾವಳಿಗಿಂತ ಹೆಚ್ಚು ಸುಂದರವಾದ ಪ್ರದೇಶವು ಯುರೋಪಿನಲ್ಲಾಗಲಿ, ಏಶಿಯಾದಲ್ಲಾಗಲಿ ನೋಡಲು ಸಿಗಲಾರದು. ಪಶ್ಚಿಮಘಟ್ಟಗಳಿಂದ ಚಾಚಿಕೊಂಡಿರುವ ಪರ್ವತ ಪ್ರದೇಶವು ಕರಾವಳಿಗೆ ಸೊಗಸಾಗಿ ಇಳಿದಿದೆ. ಈ ಪ್ರದೇಶದ ಸೌಂದರ್ಯಸಿರಿ ಉಷ್ಣವಲಯದ ಹಿತಕರ ವಾತಾವರಣದಲ್ಲಿ ಮಿಂಚುತ್ತಲಿದೆ. ಇಂಥಹ ಅಪೂರ್ವ ದೃಶ್ಯವನ್ನು ಕಾಣದ ಕಣ್ಣುಗಳಿಗೆ ಅದೊಂದು ಹಬ್ಬವಿದ್ದಂತೆ."

ಪಶ್ಚಿಮ ಘಟ್ಟಗಳ ಸೌಂದರ್ಯಕ್ಕೆ ಮಾರು ಹೋದ ಪೆಟ್ರೋ ಡೆಲ್ಲಾವಲ್ಲೆ ಆ ಘಟ್ಟಗಳನ್ನು ನೋಡಿದಾಗ ತಾನು ಇಟಲಿಯ ಅಪೆನ್ನೈನ್ ಪರ್ವತಶ್ರೇಣಿಯನ್ನು ಕಂಡಂತಾಯಿತೆಂದು ಹೇಳಿದ್ದಾನೆ.

ಉತ್ತುಂಗ ಪರ್ವತಶ್ರೇಣಿ ಮತ್ತು ದಟ್ಟವಾದ ಕಾಡುಗಳಿಂದ ಕೂಡಿದ ಮಲೆನಾಡು ದುರ್ಗಮವಾದ ಮತ್ತು ಅತ್ಯಂತ ಫಲವತ್ತಾದ ಪ್ರಾಂತವೆಂಬುದಾಗಿ ಫ್ರಾನ್ಸಿಸ್ ರಾಬ್ಸನ್ (೧೭೮೬) ಹೇಳಿದ್ದಾನೆ.

ಶರಾವತಿ ನದಿಯಿಂದ (ಗೇರಸೊಪ್ಪಾ) ಒಂಬತ್ತು ಮೈಲುಗಳಾಚೆ ಇರುವ ಪ್ರದೇಶ ಚಿತ್ರಮಯವಾಗಿಯೂ ಮನ ಮೋಹಕವಾಗಿಯೂ ತೋರುತ್ತದೆಂದೂ, ಆ ನದಿಯು ತಾನು ಕಂಡ ನದಿಗಳಲ್ಲಿಯೇ ಅತ್ಯಂತ ರಮಣೀಯವಾದುದೆಂದೂ ಪೆಟ್ರೊಡೆಲ್ಲಾವೆಲ್ಲೆ ಅಭಿಪ್ರಾಯ ಪಟ್ಟಿದ್ದಾನೆ.

**ಕೆಳದಿ ದರಬಾರು :**

"ದೊರೆ ವೆಂಕಟಪ್ಪನಾಯಕನು ನೆಲದಿಂದ ತುಸು ಎತ್ತರಕ್ಕಿದ್ದ ವೇದಿಕೆಯ ಮೇಲಿದ್ದ ಆಸನದ ಮೇಲೆ ಕುಳಿತಿದ್ದನು. ಆಸನದ ಮೇಲ್ಭಾಗದ ಹಿಂಬದಿಗೆ ಚೌಕಾಕಾರದ ಛತ್ರವಿದ್ದಿತು. ಆತನ ಬೆನ್ನಹಿಂದೆ ಉತ್ಕೃಷ್ಟವಾದ ಬಿಳಿ ರೇಷ್ಮೆಯ ಎರಡು ದಿಂಬುಗಳಿದ್ದವು. ಅವನೆದುರಿಗೆ ರಾಜ ಖಡ್ಗವಿತ್ತು. ದೊರೆಯ ಬಲಗೈಯ ಹಿಂಬದಿಯಲ್ಲಿ ಅನೇಕ ದರಬಾರಿಗಳಿದ್ದರು. ಅವರಲ್ಲೊಬ್ಬ ಉತ್ತಮವಾದ ಬಿಳಿ ನಾರು ಬಟ್ಟೆಯಿಂದ(ಚಾಮರ) ದೊರೆಗೆ ಬೀಸುತ್ತಿದ್ದನು"ಎಂದು ಪೆಟ್ರೊಡೆಲ್ಲಾವೆಲ್ಲೆ ದೊರೆಯ ದರಬಾರನ್ನು ವರ್ಣಿಸಿದ್ದಾನೆ. ಹಿರಿಯ ವೆಂಕಟಪ್ಪನಾಯಕನು ಪೋರ್ತುಗೀಜ ರಾಯಭಾರಿಗೆ ಕಸೂತಿ ಕೆಲಸದಿಂದ ಅಲಂಕೃತವಾದ ರೇಷ್ಮೆ ಬಟ್ಟೆಯ ತುಂಡನ್ನು ಕಾಣಿಕೆ ಇತ್ತನೆಂದು ಆ ರಾಯಭಾರಿಯ ಸಂಗಡ ಬಂದಿದ್ದ ಡೆಲ್ಲಾವೆಲ್ಲೆ ಬರೆದಿದ್ದಾನೆ.

ಇಕ್ಕೇರಿಗೆ ಬಂದಾಗ ದೊರೆ ವೀರಭದ್ರನಾಯಕನು ತನಗೆ (ಆ ನಾಡಿನ ಸಂಪ್ರದಾಯದ ಪ್ರಕಾರ) ತರತರದ ಕುರಿ, ಕೋಳಿ, ಹಣ್ಣು ಹಂಪಲುಗಳನ್ನು ಕಳುಹಿಸಿದ್ದನೆಂದು ಪೀಟರ್ ಮುಂಡಿ ಬರೆದಿದ್ದಾನೆ. ವೀರಭದ್ರನಾಯಕನು (೧೬೨೯-೪೫) ಇಕ್ಕೇರಿ ಅರಮನೆಯಲ್ಲಿ ತನ್ನ ಸರದಾರರೊಡನೆ ಅತ್ಯಂತ ಗಂಭೀರವಾಗಿ ಕುಳಿತಿದ್ದನು; ಅವನ ಸುತ್ತಲೂ ಕುಳಿತಿದ್ದ ಸರದಾರರು ಬಹು ವಿನೀತರಾಗಿದ್ದರು ಎಂದು ಪೀಟರ್ ಮುಂಡಿಯ ಜೊತೆ ಇಕ್ಕೇರಿಗೆ ಬಂದಿದ್ದ ಥಾಮಸ್ ರಾಬಿನ್‌ಸನ್ ಹೇಳಿದ್ದಾನೆ. ವೆಂಕಟಪ್ಪನಾಯಕನಿಂದ ಆಮಂತ್ರಿತನಾಗಿದ್ದ ಪೋರ್ತುಗೀಜ

ರಾಯಭಾರಿಯು ಅರಮನೆಯಲ್ಲಿ ನಡೆಯುತ್ತಿದ್ದ (ದೊರೆಯ ವಿನೋದಾರ್ಥವಾಗಿ ಏರ್ಪಡಿಸಿದ್ದ) ಕುಸ್ತಿ ಆಟವನ್ನು ನೋಡಲು ಹೋದನೆಂದು ಡೆಲ್ಲಾವೆಲ್ಲೆ ಬರೆದಿದ್ದಾನೆ. ದೊರೆಯು ತನ್ನ ವಿನೋದಕ್ಕಾಗಿ ಆನೆ, ಎಮ್ಮೆ, ಮುಂತಾದ ಪ್ರಾಣಿಗಳ ಕಾದಾಟಗಳನ್ನು ಏರ್ಪಡಿಸುತ್ತಿದ್ದನೆಂದು ಪೀಟರ್ ಮಂಡಿ ಉಲ್ಲೇಖಿಸಿದ್ದಾನೆ.

## ರಾಜಮಾರ್ಗಗಳು :

"ವೆಂಕಟಪ್ಪನಾಯಕನ ರಾಜ್ಯದಲ್ಲಿ ರಾಜಮಾರ್ಗಗಳು ಬಹು ಸುರಕ್ಷಿತವಾಗಿದ್ದವು; ಹೊನ್ನಾವರದ ಮಾರ್ಗಗಳು ಸುಂದರ ಮತ್ತು ವಿಶಾಲವಾಗಿದ್ದವು. ಇಕ್ಕೇರಿಗೆ ಹೋಗುವ ಮಾರ್ಗದಲ್ಲಿ ವಿಶಾಲ ವೃಕ್ಷಗಳ ಸಾಲು ತುಂಬಾ ಮನಮೋಹಕವಾಗಿತ್ತು" ಎಂಬುದಾಗಿ ಡೆಲ್ಲಾವೆಲ್ಲೆ ಉಲ್ಲೇಖಿಸಿದ್ದಾನೆ. ಇದೇ ಪ್ರವಾಸಿಯು ಇಕ್ಕೇರಿ ಸಾಗರಗಳನ್ನು ಜೋಡಿಸುವ ಸಮನಾದ ಮತ್ತು ನೇರ ರಾಜಮಾರ್ಗವು ಬಹು ಸುಂದರವೂ ಅಗಲವೂ ಇದ್ದಿತೆಂದು ಹೇಳಿದ್ದಾನೆ.

ಇಮ್ಮಡಿ ಬಸವಪ್ಪನಾಯಕನ (೧೭೩೯-೫೪) ಕಾಲದಲ್ಲಿ ಬಿದನೂರಿನಿಂದ ಬಂದರಕ್ಕೆ ಹೋಗುವ ರಸ್ತೆಯು ಸುರಕ್ಷಿತವಾಗಿತ್ತು; ಅಲ್ಲಿ ಯಾವ ಅಪರಿಚಿತ ವ್ಯಕ್ತಿಗೂ ದರೋಡೆ, ಹಿಂಸೆಗಳ ಭಯವಿರಲಿಲ್ಲವೆಂದು ಜಾಕೋಬಸ್ ಕ್ಯಾಂಟರ್ ವಿಶ್ಚರ್ ಬರೆದಿದ್ದಾನೆ.

"ಬೇರೆ ಬೇರೆಕಡೆಗಳಲ್ಲಿ ಗುಡಿಸಲುಗಳಿವೆ. ಅಲ್ಲಿ ಹಗಲು ಹೊತ್ತಿನಲ್ಲಿ ವೃದ್ಧರು ಇರುತ್ತಾರೆ. ಆ ಗುಡಿಸಲುಗಳಲ್ಲಿ ಸರಕಾರದ

ವೆಚ್ಚದಿಂದ ಪ್ರಯಾಣಿಕರಿಗೆ ಸ್ವಚ್ಛವಾದ ತಣ್ಣೀರು ದೊರೆಯುವ ವ್ಯವಸ್ಥೆಯಿದೆ" ಎಂದು ಅಲೆಗ್ಝಾಂಡರ್ ಹ್ಯಾಮಿಲ್ಟನ್ (೧೭೨೦) ಹೇಳಿದ್ದಾನೆ.

"ನಮ್ಮನ್ನು ಮತ್ತು ನಮ್ಮ ಸಾಮಾನುಗಳನ್ನು ಹೊತ್ತು ಕೊಂಡು ಒಯ್ಯುವ ಪಲ್ಲಕ್ಕಿಗಳ ಬರುವಿಕೆಯ ದಾರಿ ಕಾಯುತ್ತ ಕುಳಿತಿದ್ದೆವು" ಎಂದು (ಕೆಳದಿಗೆ ಹೋಗುತ್ತಿದ್ದಾಗಿನ ಪ್ರಸಂಗ ಕುರಿತು) ಪೆಟ್ರೊ ಡೆಲ್ಲಾವೆಲ್ಲೆ ಬರೆದಿದ್ದಾನೆ.

## ಪ್ರಮುಖ ಪಟ್ಟಣಗಳು :

"ಇಕ್ಕೇರಿ ಪಟ್ಟಣವು ಸಪಾಟಾದ ಭೂಪ್ರದೇಶದಲ್ಲಿ ನಿರ್ಮಿತ ವಾಗಿದೆ. ಸಣ್ಣ ಕೋಟೆ ಮತ್ತು ಕೊತ್ತಳಗಳಿಂದ ಕೂಡಿದ ಮೂರು ಮಹಾದ್ವಾರಗಳ ಮೂಲಕ ನಾವು ನಗರದಲ್ಲಿ ಪ್ರವೇಶಿಸಿದೆವು" ಎಂದು ಕ್ರಿ. ಶ. ೧೬೨೩ರಲ್ಲಿ ಇಕ್ಕೇರಿಯನ್ನು ಸಂದರ್ಶಿಸಿದ ಡೆಲ್ಲಾ ವೆಲ್ಲೆ ಹೇಳಿದ್ದಾನೆ. ಇನ್ನೊಂದೆಡೆಯಲ್ಲಿ ಇದೇ ಪ್ರವಾಸಿಯು ಇಕ್ಕೇರಿಯನ್ನು ಹೀಗೆ ವರ್ಣಿಸುತ್ತಾನೆ :— ಇಕ್ಕೇರಿಯು ಸಮನಾದ ಭೂಪ್ರದೇಶದಲ್ಲಿದ್ದು, ಮೂರು ಮಹಾದ್ವಾರಗಳುಳ್ಳ ಮೂರು ಸುತ್ತಿನ ಕೋಟೆಯಿಂದ ಕಂಗೊಳಿಸುತ್ತಿದೆ...... ಪಟ್ಟಣವು ಬಹು ವಿಶಾಲವಾಗಿದೆ. ನೆರಳನ್ನೀಯುವ ದೊಡ್ಡ ಮರಗಳಿವೆ. ಅಲ್ಲಿ ಅನೇಕ ಕೆರೆಗಳು ಉದ್ಯಾನಗಳೂ ಇವೆ."

"ಪೋರ್ತುಗೀಜ ರಾಯಭಾರಿಗೆ ತಂಗಲು ಕೊಟ್ಟ ಮನೆ ಯಲ್ಲಿ ಗಾಳಿ-ಬೆಳಕಂಗಳಿಗೆ ಅವಕಾಶವಿಲ್ಲದ ಚಿಕ್ಕ ಕೋಣೆಗಳಿದ್ದವು. ಇಂತಹ ಮನೆಗಳಲ್ಲಿ ನಮ್ಮ ದೇಶದ ಸಾಮಾನ್ಯ ಕಸುಬುದಾರನು

ವಾಸಿಸುವುದಿಲ್ಲ. ಬೇಸಿಗೆಯ ಉರಿ ಬಿಸಿಲಿನ ತಾಪವನ್ನು ತಗ್ಗಿಸಲು ಇಂತಹ ಕತ್ತಲು ಮನೆಗಳನ್ನು ಕಟ್ಟಿದ್ದಾರೆ" ಎಂದು ಇಕ್ಕೇರಿಯ ಮನೆಗಳ ಬಗೆಗೆ ಡೆಲ್ಲಾವೆಲ್ಲೆ ಬರೆದಿದ್ದಾನೆ.

"ಇಕ್ಕೇರಿಯು ವಿಶಾಲ ಬೀದಿಗಳು, ಮಾರುಕಟ್ಟೆಗಳು ಮುಂತಾದವುಗಳಿಂದ ಕೂಡಿದ ದೊಡ್ಡ ಪಟ್ಟಣ" ಎಂದು ಪೀಟರ್ ಮಂಡಿ ಉಲ್ಲೇಖಿಸಿದ್ದಾನೆ.

ಹೊನ್ನಾವರ ಸಮುದ್ರ ತೀರದ ಮೇಲಿನ ಚಿಕ್ಕ ಸ್ಥಳ, ಆದರೆ ಇದೊಂದು ಉತ್ತಮ ಬಂದರವೆಂದು ಡೆಲ್ಲಾವೆಲ್ಲೆ ಹೇಳಿದ್ದಾನೆ. ಗುಡ್ಡದ ಮೇಲಿರುವ ಹೊನ್ನಾವರದ ಕೋಟೆಯು ಸುಭದ್ರವಾಗಿತ್ತೆಂದು ಜಾನ್ ಫ್ರಾಯರ್ ಉಲ್ಲೇಖಿಸಿದ್ದಾನೆ.

ಇಂಗ್ಲೀಷ್ ಕಂಪನಿಯು ಭಟಕಳದಲ್ಲಿ ಒಂದು ಫ್ಯಾಕ್ಟರಿಯನ್ನು (ವ್ಯಾಪಾರ ಕೋಠಿ) ಸ್ಥಾಪಿಸಿತ್ತು. ಅದರಲ್ಲಿ ಹದಿನೆಂಟು ಆಂಗ್ಲರಿದ್ದರು. ಒಮ್ಮೆ ಅವರ ನಾಯಿ ಒಂದು ಪವಿತ್ರ ಆಕಳನ್ನು ಕೊಂದದ್ದರಿಂದ ಆ ಪಟ್ಟಣದ ಹಿಂದುಗಳು ಸಿಡಿಮಿಡಿಗೊಂಡು ಆಂಗ್ಲ ಅಧಿಕಾರಿಗಳನ್ನೆಲ್ಲ ಕೊಂದರೆಂದು ಅಲೆಕ್ಸಾಂಡರ್ ಹ್ಯಾಮಿಲ್ಟನ್ ಬರೆದಿದ್ದಾನೆ.

ಮಂಗಳೂರು ಇಡಿ ಕೆನರಾ ಪ್ರದೇಶದಲ್ಲಿಯೇ ಅತಿ ದೊಡ್ಡ ಮಾರುಕಟ್ಟೆಯಾಗಿತ್ತೆಂದು ಹ್ಯಾಮಿಲ್ಟನ್ ಅಭಿಪ್ರಾಯಪಟ್ಟಿದ್ದಾನೆ. ಮಂಗಳೂರು ಕೆಳದಿ ಅರಸರ ಸೈನಿಕರ ನೆಲೆಯಾಗಿತ್ತೆಂದು ಪಿಂಕರ್ಟನ್ ಉಲ್ಲೇಖಿಸಿದ್ದಾನೆ.

ಬಿದನೂರಿಗೆ ನೈಸರ್ಗಿಕ ರಕ್ಷಣೆಯಿದೆ. ಆ ಪಟ್ಟಣವು ಅನೇಕ ಕಾಡು ತುಂಬಿದ ಬೆಟ್ಟಗಳಿಂದ, ಇಕ್ಕಟ್ಟಾದ ಕಣಿವೆ ಮಾರ್ಗಗಳಿಂದ ಸುತ್ತುವರಿಯಲ್ಪಟ್ಟಿವೆಯೆಂದು ಬುಕಾನನ್ ಉಲ್ಲೇಖಿಸಿದ್ದಾನೆ.

**ಸಾಮಾಜಿಕ ಸ್ಥಿತಿ :**

ಇಕ್ಕೇರಿಯಲ್ಲಿ ಒಬ್ಬ ಮಹಿಳೆ ಸಹಗಮನ ಮಾಡಿದ ವರ್ಣನೆ ಡೆಲ್ಲಾವೆಲ್ಲೆ ಕೊಟ್ಟಿದ್ದಾನೆ. ಸತಿ ಪದ್ಧತಿಯು ಕ್ರೂರ ಮತ್ತು ಅನಾಗರಿಕ ಸಂಪ್ರದಾಯವೆಂದು ಖಂಡಿಸಿದರೂ ಭಾರತೀಯ ಸ್ತ್ರೀಯರ ಪಾತಿವ್ರತ್ಯ ಔದಾರ್ಯಗಳನ್ನು ಡೆಲ್ಲಾವೆಲ್ಲೆ ಶ್ಲಾಘಿಸಿದ್ದಾನೆ. ಸಹಗಮನ ಮಾಡಲಿದ್ದ ಆ ಮಹಿಳೆಯನ್ನು ಭೆಟ್ಟಿಯಾಗಿ, ಆ ಕಾರ್ಯ ಕೈಕೊಳ್ಳದಂತೆ ಅವಳನ್ನು ಮನವೊಲಿಸಲು ಯತ್ನಿಸಿದನು. ಆದರೆ ಅವನ ಉಪದೇಶ ನಿರರ್ಥಕವಾಯಿತು. ಅವಳು ಈ ಪ್ರವಾಸಿ ಕೇಳಿದ ಪ್ರಶ್ನೆಗಳಿಗೆಲ್ಲ ಸಮಂಜಸವಾದ ಉತ್ತರಗಳನ್ನು ಶಾಂತಚಿತ್ತದಿಂದ ಕೊಟ್ಟಳು. ತನಗೆ ಸಹಗಮನ ಮಾಡುವಂತೆ ಯಾರು ಒತ್ತಾಯಿಸಿಲ್ಲವೆಂದು ಅವನಿಗೆ ಸ್ಪಷ್ಟಪಡಿಸಿದಳು.

ಡೆಲ್ಲಾವೆಲ್ಲೆ ಇಕ್ಕೇರಿಯ ನರ್ತಕಿಯರ ಬಗೆಗೆ ತುಸು ಮಾಹಿತಿ ಕೊಡುತ್ತಾನೆ. ನರ್ತಕಿಯರ ತಂಡವು ಸಾವಧಾನವಾಗಿ ನೃತ್ಯ ಆರಂಭಿಸಿ, ಕ್ರಮೇಣ ಭಾವ-ಭಂಗಿಗಳನ್ನು ತೀವ್ರಗೊಳಿಸಿದುದು ಬಹು ಸುಂದರ ದೃಶ್ಯವಾಗಿತ್ತೆಂದು ಅವನು ಬರೆದಿದ್ದಾನೆ. ಕೆಳದಿ ರಾಜ್ಯದಲ್ಲಿ ಸ್ತ್ರೀಯರು ಶೃಂಗಾರಪ್ರಿಯರಾಗಿದ್ದರೆಂದು ಹೇಳಿದ್ದಾನೆ. ಧಾರ್ಮಿಕ ಹಬ್ಬಗಳ ಕಾಲದಲ್ಲಿ ಜರುಗುತ್ತಿದ್ದ ಕೋಲಾಟ ಮತ್ತು ನೃತ್ಯಗಳ ಸುಂದರ ವರ್ಣನೆ ಕೊಟ್ಟಿದ್ದಾನೆ.

ಇಕ್ಕೇರಿಯ ಅಘೋರೇಶ್ವರ ದೇವಾಲಯದಲ್ಲಿ ನಡೆದ ಧಾರ್ಮಿಕ ಉತ್ಸವಗಳನ್ನು, ನೃತ್ಯಗಳನ್ನು ವಿಶದವಾಗಿ ವರ್ಣಿಸಿರುವನು. "ಅಲಂಕೃತವಾದ ಪಲ್ಲಕ್ಕಿಯಲ್ಲಿ ದೇವರ ಮೂರ್ತಿಗಳಿಟ್ಟು ಮೆರವಣಿಗೆ ಹೊರಡಿಸಿದ್ದರು. ಮೆರವಣಿಗೆಯಲ್ಲಿ ದೇವಸ್ಥಾನದ ಪುರೋಹಿತರು, ಸ್ತ್ರೀ-ಪುರುಷರು ಬಹು ದೊಡ್ಡ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ನೃತ್ಯ, ಸಂಗೀತ, ಹಗಲು ದೀವಟಿಗೆಗಳೊಂದಿಗೆ ಪಲ್ಲಕ್ಕಿಯನ್ನು ಪಟ್ಟಣದ ಪ್ರಮುಖ ಬೀದಿಗಳಲ್ಲಿ ಮೆರೆಸಿದರು. ಕೊನೆಗೆ ದೇವರ ಮೂರ್ತಿಗಳನ್ನು ಮರಳಿ ದೇವಾಲಕ್ಕೆ ತಂದು, ವಿಧಿ ಪೂರ್ವಕವಾಗಿ ಮೊದಲಿನ ಸ್ಥಳದಲ್ಲಿರಿಸಿದರು." ಎಂದು ಡೆಲ್ಲಾವೆಲ್ಲೆ ಬರೆದಿದ್ದಾನೆ.

**ವಿದ್ಯಾಭ್ಯಾಸ :**

ಪೆಟ್ರೋ ಡೆಲ್ಲಾವೆಲ್ಲೆ ಇಕ್ಕೇರಿಯ ಪ್ರಾಥಮಿಕ ಶಾಲೆಯಲ್ಲಿ ನಡೆಯುತ್ತಿದ್ದ ಅಭ್ಯಾಸಕ್ರಮವನ್ನು ಹೀಗೆ ವರ್ಣಿಸಿದ್ದಾನೆ :— "ನಾನು ದೇವಾಲಯದ ಮುಂಭಾಗದಲ್ಲಿದ್ದುಕೊಂಡು ಚಿಕ್ಕ ಬಾಲಕರು ಅಲ್ಲಿ ಅಂಕಗಣಿತವನ್ನು ವಿಚಿತ್ರ ರೀತಿಯಲ್ಲಿ ಕಲಿಯುತ್ತಿದ್ದುದನ್ನು ನೋಡಿ ವಿನೋದಿಸಿದ ಸಂಗತಿಯನ್ನು ಇಲ್ಲಿ ವಿವರಿಸುತ್ತೇನೆ. ಅಲ್ಲಿ ನಾಲ್ವರು ಬಾಲಕರಿದ್ದರು. ಅವರೆಲ್ಲರೂ ತಮ್ಮ ಶಿಕ್ಷಕನಿಂದ ಒಂದೇ ಪಾಠವನ್ನು ಕಂಠಪಾಠ ಮಾಡುವುದಕ್ಕಾಗಿ ತೆಗೆದುಕೊಂಡಿದ್ದರು. ಅವರು ಹಿಂದಿನ ಪಾಠಗಳನ್ನು ಮರೆಯಬಾರದೆಂದು ಕಂಠಪಾಠ ಮಾಡುತ್ತಿದ್ದರು. ಅವರಲ್ಲೊಬ್ಬನು ಸಂಗೀತ ರೂಪವಾಗಿ ಒಂದು ತರಹದ ಸ್ವರ ತೆಗೆದು ಪಾಠದ ಒಂದು ಭಾಗವನ್ನು

ಉಚ್ಚರಿಸಿದನು. (ಈ ಪದ್ಧತಿಯಿಂದ ಮನಸ್ಸಿನ ಮೇಲೆ ಆಳವಾದ ಪ್ರಭಾವವುಂಟಾಗುತ್ತದೆ.) ಉದಾಹರಣೆಗಾಗಿ, "ಒಂದ ಒಂದಲೇ ಒಂದೊ", ಹೀಗೆನ್ನುತ್ತ ಅವನು ಅದೇ ಸಂಖ್ಯೆಯನ್ನು ಬರೆದನು. —ಲೆಕ್ಕಣಿಕೆಯಿಂದಲ್ಲ, ಕಾಗದದ ಮೇಲೆ ಬರೆಯಲಿಲ್ಲ. ಆದರೆ ಬರೆಯುವುದಕ್ಕಾಗಿಯೇ ಉತ್ತಮವಾದ ಮರಳನ್ನು ಹರಡಿ ಸಿದ್ಧಪಡಿಸಿದ ನೆಲದ ಮೇಲೆ ತನ್ನ ಕೈಬೆರಳಿನಿಂದ ಬರೆದನು. ಮೊದಲನೆಯವನು ತಾನು ಹಾಡಿದಂತೆ ಬರೆದ ನಂತರ ಉಳಿದವರೆಲ್ಲರೂ, ಅದರಂತೆಯೇ ಒಟ್ಟಿಗೆ ಅಂದು ಅದನ್ನು ಬರೆದರು. ನಂತರ ಮೊದಲನೆಯವನು ಪಾಠದ ಎರಡನೇ ಭಾಗವನ್ನು ಅನ್ನುತ್ತ ಅದನ್ನು ಬರೆದನು: "ಎರಡ ಒಂದಲೆ ಎರಡೋ". ಉಳಿದವರು ಅವನ ಕ್ರಮವನ್ನೇ ಅನುಸರಿಸಿದರು."

ಮೇಲೆ ಹೇಳಿದ ವಿದೇಶೀ ಪ್ರವಾಸಿಗಳ ಉಲ್ಲೇಖಗಳಿಂದ ಕೆಳದಿ ರಾಜ್ಯದ ಸ್ಥಿತಿಗತಿಗಳ ಸ್ಪಷ್ಟ ಚಿತ್ರಣ ದೊರೆಯುತ್ತದೆ.



# ಒಪ್ಪೋಲೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೨ | ೨ | ಪ್ರಯತ | ಪ್ರಯತ್ನ |
| ೭ | ೧ | ಅಸಸು | ಅರಸು |
| ೯ | ೧೨ | ಕಜ್ಜು | ಕಜ್ಜ |
| ೨೧ | ೭ | ಬಂಕಾಪೂರ | ಬಂಕಾಪುರ |
| ,, | ೧೯ | ತೀರನ | ತೀರದ |
| ೪೯ | ೧೫ | ವೆಂಕಟಪ್ಪನಾಯಕನು | ವೆಂಕಟಪ್ಪನಾಯಕನ |
| ೫೧ | ೨ | ಶಿಲಾಯ | ಶಿಲಾಮಯ |

# ಆಧಾರ ಗ್ರಂಥಗಳು

೧. ಕೆಳದಿನೃಪವಿಜಯ—ಲಿಂಗಣ್ಣ ಕವಿ

೨. ಮೈಸೂರು ಗೆಜೆಟಿಯರ—ಲೂಯಿ ರೈಸ್

೩. The Nayakas of Ikkeri-K. D. Swaminathan

೪. ಇಕ್ಕೇರಿ ಸಂಸ್ಥಾನದ ಚರಿತ್ರೆ—ಎಂ. ಎಸ್. ಪುಟ್ಟಣ್ಣ

೫. **Government and Administration Under the Keladi Rulers** (Thesis)
—K. N. Chitnis

೬. ಶಿವತತ್ವರತ್ನಾಕರ—ಬಸವಪ್ಪನಾಯಕ

೭. ಎಪಿಗ್ರಾಫಿಯಾ ಕರ್ನಾಟಿಕಾ

೮. The Nayakas of Keladi
—N. Lakshminarayan Rao
**(In Vijayanagara Sexcentenary Commemoration Volume)**

## ಕೆಳದಿ ರಾಜ್ಯ ೧೪೯೯-೧೭೬೩

ಡಾ. ಕೆ. ಎಸ್. ಚಿಟ್ನೀಸರವರ ಅಪ್ರಕಟಿತ ಪ್ರಬಂಧದಿಂದ

# ಉಪನ್ಯಾಸ ಗ್ರಂಥಮಾಲೆಯ ಪುಸ್ತಕಗಳು

## ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ

೧. ಭವಭೂತಿ (ದ್ವಿ.ಮು.) —ಕೆ. ಕೃಷ್ಣಮೂರ್ತಿ
೨. ಮನೋರೋಗಗಳು (ತೃ. ಮು.) —ಎನ್. ಆರ್. ಕುಲಕರ್ಣಿ
೩. ಪ್ರಥಮ ಪಂಚವಾರ್ಷಿಕ ಯೋಜನೆ ಹಾಗೂ ಒಕ್ಕಲುತನ —ಎನ್. ಪಿ. ಪಾಟೀಲ
೪. ಗಾದೆಗಳು (ಚ. ಮು.) —ಎ. ಕೆ. ರಾಮಾನುಜನ್
೫. ಭಾರತದಲ್ಲಿ ಜಾತಿಪದ್ಧತಿ (ದ್ವಿ. ಮು.) --ವಿಕ್ಟರ ಎಸ್. ಡಿಸೋಜಾ
೬. ಕೀಟಕ ಪಿಡುಗುಗಳ ಸಮೀಕ್ಷಣೆ (ದ್ವಿ. ಮು.) —ಎಸ್. ಎಸ್. ಕಟಗಿಹಳ್ಳಿಮಠ
೭. ರಾಜಕೀಯ ಪಕ್ಷಗಳು (ದ್ವಿ.ಮು.) —ಎನ್. ರಾಜಗೋಪಾಲರಾವ
೮. ಸ್ವಾದಿ ಅರಸುಮನೆತನ ( ,, ) —ಸ. ಸ. ಮಾಳವಾಡ
೯. ಮಕ್ಕಳ ಶಿಕ್ಷಣ (ತೃ. ಮು.) —ಡಿ. ಎಸ್. ಕರ್ಕಿ
೧೦. ಮೂಢ ನಂಬಿಕೆಗಳು ( ,, ) —ಎಲ್. ಆರ್. ಹೆಗಡೆ
೧೧. ಸಂಸ್ಕೃತ ಕವಯಿತ್ರಿಯರು (ದ್ವಿ. ಮು.) —ಕೆ. ಟಿ. ಪಾಂಡುರಂಗಿ
೧೨. ನಿತ್ಯಜೀವನದಲ್ಲಿ ರಸಾಯನಶಾಸ್ತ್ರ (ದ್ವಿ.ಮು.)–ಬಿ. ವಿರೂಪಾಕ್ಷಪ್ಪ
೧೩. ಸಾರ್ವಜನಿಕ ಆಡಳಿತ (ದ್ವಿ. ಮು.) —ಜಿ. ಎಸ್. ಹಾಲಪ್ಪ
೧೪. ವಿಚಾರವಾದ ( ,, ) —ಗೌರೀಶ ಕಾಯ್ಕಿಣಿ
೧೫. ಮಹಾಕವಿ ಮಿಲ್ಟನ್ ( ,, ) —ಜಿ. ಎಸ್. ಆಮೂರ

೧೬. ಭಾರತದಲ್ಲಿ ಗ್ರಂಥಾಲಯ ಪ್ರಸಾರ (ದ್ವಿ. ಮು.)—ಕೆ. ಎಸ್. ದೇಶಪಾಂಡೆ

೧೭. ಭಾರತೀಯ ನಾಗರಿಕತೆಗೆ ಮನುವಿನ ಕೊಡುಗೆ (ದ್ವಿ. ಮು.) —ಬಿ. ಎಚ್. ಶ್ರೀಧರ

೧೮. ಜನಸಂಖ್ಯೆ ಹಾಗೂ ಆಹಾರ ಸಮಸ್ಯೆ —ಪಿ. ಎಂ. ಉಮಾಕಾಂತಶಾಸ್ತ್ರಿ

೧೯. ಸೌರವ್ಯೂಹ ( ದ್ವಿ. ಮು.) —ಸಿ. ಎನ್. ಶ್ರೀನಿವಾಸ ಅಯ್ಯಂಗಾರ

೨೦. ಪ್ರಾಚೀನ ಭಾರತದಲ್ಲಿ ಸಾಮಾಜಿಕ ಜನಜೀವನ (ದ್ವಿ.ಮು.)—ಸಿ. ವ್ಹಿ. ರಂಗಸ್ವಾಮಿ

೨೧. ಸಮಾಜಕಾರ್ಯ (ದ್ವಿ. ಮು.) —ಎಚ್. ಎಂ. ಮರುಳಸಿದ್ಧಯ್ಯ

೨೨. ಸಂಸತ್ತಿನ ಕಾರ್ಯಪದ್ಧತಿ ( ,, ) —ಎ. ಎಂ ರಾಜಶೇಖರಯ್ಯ

೨೩. ಕನ್ನಡ ನಾಡಿನ ಶಾಸನಗಳು ( ,, ) —ಪಿ.ಬಿ. ದೇಸಾಯಿ

೨೪. ಕವೀಂದ್ರ ರವೀಂದ್ರರು(ದ್ವಿ. ಆ.) —ಸ ಸ. ಮಾಳವಾಡ

೨೫. ನಾಗಾನಂದ ( ,, ) —ಎಚ್. ಪಿ. ಮಲ್ಲೇದೇವರು

೨೬. ಜೀವನದಲ್ಲಿ ನಗೆ ( ,, ) —ಎಂ. ಎಸ್. ಸುಂಕಾಪುರ

೨೭. ಬಸವಣ್ಣನವರ ಯೋಜನೆಗಳು (ದ್ವಿ. ಮು.) —ಬಿ. ಸಿ. ಜವಳಿ

೨೮. ೧೮೫೭ರ ಕ್ರಾಂತಿ (ದ್ವಿ. ಮು.) —ಸಿ. ವೀರಬಸಣ್ಣ

೨೯. ಕನ್ನಡ ಕಥಾಸೃಷ್ಟಿ (ದ್ವಿ. ಮು.) — ಬಿ. ಬಿ. ಮಹೀಶವಾಡಿ

೩೦. ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರರಸ(ದ್ವಿ.ಮು)- ಕೆ.ಕೃಷ್ಣಮೂರ್ತಿ

೩೧. ನೀರಾವರಿ ಬೇಸಾಯ ( ದ್ವಿ.ಮು. ) — ಎಸ್. ಎ. ಹೊಸಮನಿ

೩೨. ಸಾರ್ವಜನಿಕ ಅಭಿಪ್ರಾಯ —ಎನ್. ರಾಜಗೋಪಾಲರಾವ್

೩೩. ಕನ್ನಡ ಕಾವ್ಯಗಳಲ್ಲಿ ಕಿರಾತಾರ್ಜುನ ಪ್ರಸಂಗ (ದ್ವಿ. ಮು.)_ದೇವೇಂದ್ರಕುಮಾರ ಹಕಾರಿ

೩೪. ಕನ್ನಡಕ್ಕೆ ಪುರಂದರದಾಸರು ನೀಡಿದ ಕೊಡುಗೆ (ದ್ವಿ. ಮು)—ಜಿ. ಡಿ. ನಾಡಕರ್ಣಿ

೩೫. ಫ್ಯಾಶನ್ನುಗಳು (ದ್ವಿ. ಮು.) —ಕೆ. ಡಿ. ತಂಗೋಡ

೩೬. ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ವನಿಷ್ಠೆ
(ದ್ವಿ.ಮು.)—ಬಿ. ವ್ಹಿ. ಮಲ್ಲಾಪುರ

೩೭. ಅಭಿವೃದ್ಧಿ ಯೋಜನೆಗಳಲ್ಲಿ ಸಹಕಾರದ ಪಾತ್ರ
(ದ್ವಿ.ಮು.)—ಎಸ್. ಜಿ. ಕರಭಂಟನಾಳ

೩೮. ಕನ್ನಡ ಜೈನ ಪುರಾಣಗಳು (ದ್ವಿ.ಮು.) —ಸದಾನಂದ ನಾಯಕ

೩೯. ಕನ್ನಡ ನಾಟ್ಯಸೃಷ್ಟಿ (ದ್ವಿ. ಮು.) —ಎಚ್. ಜಿ. ಲೋಕೂರ

೪೦. ಹರಿಹರನು ಚಿತ್ರಿಸಿದ ಶಿವಶರಣೆಯರು(ದ್ವಿ.ಮು.)—ಬಿ. ಬಿ. ಹೆಂಡಿ

೪೧. ನೀವು ಬಯಸುವ ಮಗು ಗಂಡೊ ? ಹೆಣ್ಣೊ ?
(ದ್ವಿ. ಮು.)—ಕೆ. ಆರ್. ರಾಮಸ್ವಾಮಿ

೪೨. ಆಂಡಯ್ಯ —ಬಿ. ಎಸ್. ಕುಲಕರ್ಣಿ

೪೩. ಬೆಳವಲನಾಡಿನ ಬೆಳೆಗಳು —ಎಸ್. ಎ. ಹೊಸಮನಿ

೪೪. ಜಾನಪದ ಕಥೆಗಳು (ದ್ವಿ. ಮು.)—ಎಲ್. ಆರ್. ಹೆಗಡೆ

೪೫. ಸುಧಾರಿಸಿದ ಬೇಸಾಯ —ಎ. ಸಿ. ಕಲ್ಯಾಣಿಮಠ

೪೬. ಕನ್ನಡ ನಾಡಿನ ಐತಿಹಾಸಿಕ
ಮಹಾಪುರುಷರು (ದ್ವಿ.ಮು.) —ಬಿ. ಆರ್. ಗೋಪಾಲ

೪೭. ಗ್ರಂಥಾಲಯದ ಅಂತರಂಗ(ದ್ವಿ.ಮು.)—ಎಸ್. ಆರ್. ಗುಂಜಾಳ

೪೮. ಸ್ತ್ರೀ ಮತ್ತು ಶಿಕ್ಷಣ (ದ್ವಿ. ಮು.) —ವನಮಾಲಾ ಅಚಾರ್

೪೯. ಜಾಗತಿಕ ಸರಕಾರ —ಸಿ. ವೀರಬಸಣ್ಣ

೫೦. ಸಮುದಾಯ ಸಂಘಟನೆ —ಎಚ್. ಎಂ. ಮರುಳಸಿದ್ಧಯ್ಯ

೫೧. ಅಶೋಕನ ಧರ್ಮ ಶಾಸನಗಳು —ಎಸ್. ಎಚ್. ರಿತ್ತಿ

೫೨. ಪ್ರಾಚೀನ ಭಾರತದ ರಾಜ್ಯ ಪದ್ಧತಿ (ದ್ವಿ. ಮು)—ಸಿ. ವ್ಹಿ. ರಂಗಸ್ವಾಮಿ

೫೩. ಅಕ್ಕಮಹಾದೇವಿ ಮತ್ತು ಮೀರಾಬಾಯಿ,,— ಎಸ್.ಎಸ್. ಕಬ್ಬಿನ

೫೪. ಕನ್ನಡ ಕಾವ್ಯದಲ್ಲಿ ವೀರರಸ ನಿರೂಪಣೆ— ಬಿ. ಬಿ. ಮಹೀಶವಾಡಿ

೫೫. ಹರಿಹರ ಮಹಾಕವಿಯ ಕೆಲವು
ಮಹೋನ್ನತ ವಿಚಾರಗಳು —ಬಿ. ಸಿ. ಜವ

೫೬. ಭಾರತ ರಾಜ್ಯಘಟನೆ —ಎಂ. ಎಸ್. ಪಾಟೀ

೫೭. ಪಂಚಾಯತಿ ರಾಜ್ಯ —ಎಸ್. ಜಿ. ಕರಭಂಟನಾ
ಮತ್ತು ಕೆ. ಡಿ. ಬಸ

೫೮. ವಿಷಮಜ್ವರ —ಪಿ. ಎಸ್. ಶಂಕ

೫೯. ಪುಸ್ತಕ ಭಾಂಡಾರ ಕಾಯದೆ —ಜಿ. ಎಂ. ಪಾಟೀ

೬೦. ಸರ್ ಐಸಾಕ ನ್ಯೂಟನ್ —ಆರ್. ವ್ಹಿ. ಅಬ್ಬಿಗೇ

೬೧. ಗ್ರಾಮಾಭ್ಯುದಯದ ಯೋಜನಾಂಗಗಳು —ಟಿ. ಕೆ. ಮೇ

೬೨. ಹರಿಜನರ ಸಮಸ್ಯೆಗಳು ಹಾಗೂ ಅವುಗಳ ಪರಿಹಾರ
—ಎಸ್. ಕೆ. ಕಡೆತೋಟ

೬೩. ರಾಸಾಯನಿಕ ಕಿಣ್ವಗಳು —ಎಂ. ಎಸ್. ಎಸ್. ರಾ

೬೪. ಪ್ರಜಾಪ್ರಭುತ್ವದ ಮೂಲ ತತ್ವಗಳು —ಕೆ. ಬಿ. ಬಕ್ಕ

೬೫. ಹೃದಯಾಘಾತ —ಪಿ. ಎಸ್. ಶಂಕ

೬೬. ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ— ಡಿ. ಎ. ಚಿ

೬೭. ಶ್ರೀ ರಾಮಾಯಣ ದರ್ಶನದಲ್ಲಿ ಕುವೆಂಪು
ಸೃಜಿಸಿದ ಮೂರು ಪಾತ್ರಗಳು —ಎಂ. ಜಿ. ಬಿರಾದಾ

೬೮. ಯೋಜನೆಗಳೇಕೆ ಬೇಕು ? —ಎಸ್. ಎಸ್. ಯಮ

೬೯. ಸಗರ ನಾಡಿನ ಶಿವಶರಣರು —ವ್ಹಿ. ಶಿವಾನಂ

೭೦. ವಿಜ್ಞಾನದ ದೃಷ್ಟಿಯಲ್ಲಿ ಸೃಷ್ಟಿ —ಆರ್. ಎಸ್. ಭೂಸನೂರಮ

೭೧. ವಿಜಯನಗರದ ನಿರ್ಣಾಯಕ ಯುದ್ಧ —ಎಸ್. ಬಿ. ಕೋಡ

೭೨. ಬಸವಣ್ಣನವರನ್ನು ಕುರಿತ ಶಾಸನಗಳು —ಎಂ. ಎಂ. ಕಲಬುಗಿ

೭೩. ಆಧುನಿಕ ಭಾಷಾ ವಿಜ್ಞಾನ —ಜೆ. ಎಸ್. ಕು

೭೪. ಪುರಾಣ ಜಿಜ್ಞಾಸೆ —ಎಲ್. ಆರ್. ಹೆಗ

೭೫. ಭಾರತದಲ್ಲಿ ಶೈಕ್ಷಣಿಕ ಪ್ರಯೋಗ —ವ್ಹಿ. ಎಸ್. ಕುಲಕರ್ಣಿ

೭೬. ಹರಿಹರನ ಗಿರಿಜಾ ಕಲ್ಯಾಣ —ಬಿ. ವ್ಹಿ. ಶಿರೂರ

೭೭. ಕನ್ನಡ-ನುಡಿಯ ಬೆಳವಣಿಗೆ —ಎಚ್. ಜಿ. ಲೋಕೂರ

೭೮. ಅಧಿಕ ಉತ್ಪಾದನೆಗಾಗಿ ಮಿಶ್ರತಳಿ ಬೆಳೆಗಳು —ಎ. ಸಿ. ಕಲ್ಯಾಣಮಠ

೭೯. ಹೊಟ್ಟೆಯ ಹುಣ್ಣು —ಪಿ. ಎಸ್. ಶಂಕರ್

೮೦. ಸಂಯೋಜಕ ಶಕ್ತಿ —ಬಿ. ಜಿ. ಜ್ಯೋತಿ

೮೧. ಸಂಸದೀಯ ಸರಕಾರ ಭಾರತಕ್ಕೆ ಒಪ್ಪುವುದೆ ? —ವಸಂತ ಪಾಟೀಲ

೮೨. ನಮ್ಮ ರೈತರೇಕೆ ಹಿಂದುಳಿದಿದ್ದಾರೆ ? —ಎಂ. ಸಿ. ಕೊಡ್ಲಿ

೮೩. ನಗೆಗಾರ ನಯಸೇನ —ಎಂ. ಎಸ್. ಸುಂಕಾಪುರ

೮೪. ಶೂನ್ಯಸಂಪಾದನೆ —ವ್ಹಿ. ಎಸ್. ಕಂಬಿ

೮೫. ಮಹಮೂದ ಗವಾನ —ಎಲ್. ಆರ್. ಕುಲಕರಣಿ